



# ವಾಲ್ಮೀಕಿಯ ಜಯ

R. Sankar Rao



—ಹೊಸಕೆರೆ ಚಿದಂಬರಯ್ಯ—

# ನೋಡಿದರೆ ಬಿಡದೆ ಇರುವ ಪುಸ್ತಕಗಳು

**ಲೇಖಕ:—ಹೊಸಕೆರೆ ಚಿದಂಬರಯ್ಯ,**

**ಭಕ್ತಬಂಧುಕಾರ್ಯಾಲಯ, ಬಸವನಗುಡಿ, ಬೆಂಗಳೂರು ಸಿಟಿ.**

---

**ನೀತಿಗಳ ನೆಲಗಟ್ಟು:—** ಪುರಾಣೇತಿಹಾಸಗಳಲ್ಲಿರುವ ಒಂದೊಂದು ನೀತಿಯ ಅನೇಕ ಉದಾಹರಣೆಗಳನ್ನು ಒಂದೇ ಕಡೆಗೆ ತಂದು ಅವುಗಳನ್ನು ಬೇರೆ ಬೇರೆ ಮೆಟ್ಟಿಲುಗಳಾಗಿ ಮಾಡಿ ನೀತಿವಿಚಾರಕ್ಕೆ ಹೆದ್ದಾಳವು ಕೊಟ್ಟಿರುವದು. ೧ನೇ ಭಾಗ ೦-೧೨-೦, ೨ನೇ ಭಾಗ ೦-೧೨-೦, ಎರಡು ಭಾಗಗಳೂ ಕೂಡಿರುವದಕ್ಕೆ ರೂ. ೧-೮-೦

**ಆತ್ಮಶಕ್ತಿಯು ತೇಜಸ್ಸು:—** ಆತ್ಮಶಕ್ತಿಯ ವಿವಿಧವಿಚಾರವಿಶೇಷಗಳನ್ನು ಇತಿಹಾಸಪ್ರಸಿದ್ಧರಾದವರ ಉದಾಹರಣೆಯೊಡನೆ ವಿವರಿಸಿರುವದು. ರೂ. ೧-೫-೦

**ಭರತಖಂಡದ ಜೀವಜ್ಯೋತಿಗಳು:**—ಐತಿಹಾಸಿಕಮಹನೀಯರನೇಕರ ಚರಿತ್ರೆಯನ್ನು ಸಚಿತ್ರವಾಗಿ ವಿವರಿಸಿರುವದು. ರೂ. ೧-೪-೦

**ಶ್ರೀವಿದ್ಯಾರಣ್ಯಕಾವ್ಯ:**—ದೇಶಾಭಿಮಾನವನ್ನೂ ಧರ್ಮಾಭಿಮಾನವನ್ನೂ ಹುರಿದುಂಬಿಸುವ ಚಂಪು. ರೂ. ೧-೦-೦

**ಭರತನ ಬಂಧುಪ್ರೇಮ:—**ಪ್ರಾಚೀನಸಂಪ್ರದಾಯಗಳನ್ನು ಆಧುನಿಕ ದೃಷ್ಟಿಯಿಂದ ಸಕಾರಣವಾಗಿ ವಿವರಿಸುತ್ತ ಬರೆದಿರುವ ಭರತನ ಕಥೆ. ರೂ. ೦-೧೦-೦

**ಗುಣನಿರೂಪಣೆ—** ಇತಿಹಾಸದಿಂದ ಉದಾಹರಿಸಿ ಗುಣಗಳನ್ನೆಲ್ಲ ನೀರ್ಯ ಪತ್ರರವಾಗಿ ಬಣ್ಣಿಸಿರುವದು. ರೂ. ೦-೫-೦

**ವಾಲ್ಮೀಕಿಯ ಜಯ:**— ಜ್ಞಾನಬಲಕ್ಕಿಂತಲೂ ಬಾಹುಬಲಕ್ಕಿಂತಲೂ ಪ್ರೇಮಬಲವೇ ಜಗತ್ತಿನ ನೆಮ್ಮದಿಗೆ ಕಾರಣವೆಂದು ತೋರಿಸುವ ಬಂಗಾಲೀಕಾದಂಬರಿಯ ಅನುವಾದ. ರೂ. ೦-೫-೦

**ತಾರಾನಾಥತರ್ಕವಾಚಸ್ಪತಿ:**— ಅಪ್ರತಿಮಪಂಡಿತನಾಗಿ ಉದ್ಯೋಗಬಲದಿಂದ ತನ್ನ ಜೀವಿಕೆಯನ್ನು ಉನ್ನತಸ್ಥಿತಿಯಲ್ಲಿಟ್ಟುಕೊಂಡು ಧರ್ಮಾರ್ಥವಾಗಿ ವಿದ್ಯೆಯನ್ನು ಪ್ರಚಾರಮಾಡಿ ಪರೋಪಕಾರದಿಂದ ಸಮಸ್ತ ರಾಜರನ್ನೂ ಬೆರಗುಮಾಡಿರುವಂಥ ಚರಿತ್ರೆಯ ಮೇಲುಪಙ್ಕ್ತಿ. ಆ. ೧೦

---

ಮಂಚಲದೊರೆ ರಾಮರಾವ್,

**ಎಸ್. ಎಸ್. ಎನ್. ಬುಕ್‍ಡಿಪೊ, ಬಸವನಗುಡಿ, ಬೆಂಗಳೂರು ಸಿಟಿ.**

ಮತ್ತು **ಶಂಕರಪುಸ್ತಕಭಂಡಾರ, ಧಾರವಾಡ.**

# ವಾಲ್ಮೀಕಿಯ ಜಯ




ಹೊಸಕೆರೆ ಚಿದಂಬರಯ್ಯ,

ಭಕ್ತಬಂಧು ಕಾರ್ಯಾಲಯ, ಬಸವನಗುಡಿ,

**ಬೆಂಗಳೂರು ಸಿಟಿ.**



ಕ್ರಿ. ೧೯೨೮. ಜನವರಿ

 ಮೂರನೆ ಮುದ್ರಣ, ೧೦೦೦ ಪ್ರತಿಗಳು 

ಶಾ. ೧೮೪೯. ಪುಷ್ಯ





ಬಿ. ಬಿ. ಡಿ. ಪವರ್ ಪ್ರೆಸ್, ಬೆಂಗಳೂರು ಸಿಟಿ.




ಬೆಲೆ: ೮ ಆಣೆ

# ಈ ಗ್ರಂಥಕರ್ತರ ಇತರ ಗ್ರಂಥಗಳು

**ಶಾಲೋಪಯೋಗಿ ಪುಸ್ತಕಗಳು.**

ಗಣಿತಾಬ್ಜಭಾಸ್ಕರ, ಚರಿತ್ರಚಿಂತಾಮಣಿ,
ಉಪಾಧ್ಯಾಯರ ಯೋಗ್ಯತೆಗಳು, ಮನಶ್ಶಿಕ್ಷಣ,
ಬೋಧನಕ್ರಮ, ಬೋಧನೆಯ ಸ್ವಭಾವ.

**ಪದ್ಯಕಾವ್ಯಗಳು**

ಅನುಭವಾಮೃತ,–ಸರ್ವಾರ್ಥಸಂದರ್ಶಿನಿ ಎಂಬ ಹೊಸ ಟೀಕಿನೊಡನೆ,
ಪರಮಾತ್ಮಸ್ತುತಿ, ಗುರುಸ್ತುತಿಸುಮಾಂಜಲಿ, ಭಕ್ತಿಗೀತಾವಳಿ,
ಮನಸ್ಸಿಗುಪದೇಶ, ನೀತಿಸಾರ, ಸ್ತ್ರೀಧರ್ಮಸಂಗ್ರಹ,
ಭಕ್ತಿದೀಪಿಕೆ, ಶಂಕರಸ್ತೋತ್ರಮಾಲೆ,
ಮಾರುತಿಯ ಚರಿತ್ರೆ, ಶ್ರೀವಿದ್ಯಾರಣ್ಯಕಾವ್ಯ.

**ನಾಟಕಗಳು**

ಸುಶೀಲಾಪರಿಣಯ, ಕೃಷ್ಣಮಹೇಶ್ವರೀ, ಸುಧರ್ಮಪ್ರಭಾವ,
ಕಲಿಸಂತರಣ, ನವೀನಕಲ್ಪ, ಚೂಡಾಲೆ.



**ಕೀರ್ತನ—ಹರಿಕಥೆ—ಗಳು**

ಗಣಪತಿಸ್ವಯಂವರ, ಅನಸೂಯಾಖ್ಯಾನ, ಧ್ರುವಾಖ್ಯಾನ,
ಉತ್ತರಗೋಗ್ರಹಣ, ಶ್ರೀವಿದ್ಯಾರಣ್ಯಾಖ್ಯಾನ,
ಶ್ರೀಶಂಕರಾಚಾರ್ಯರ ಆಖ್ಯಾನ.



**ಕಾದಂಬರಿಗಳು**

ಕಾಲಾಂತಕ, ಮೈತ್ರೇಯಿ.

**ಇತರ ವಚನಗ್ರಂಥಗಳು**

ತಾರಾನಾಥತರ್ಕವಾಚಸ್ಪತಿ, ಮಾಧವರಾವಸಿಂಧ್ಯ, ವಸ್ತುಪ್ರದರ್ಶನ,
ಶಂಕರಕಥಾಮೃತ, ರಾಜಭಕ್ತಿ, ಆರ್ಯಮತಸಾರ, ಸೂಕ್ತಿಮಾಲೆ,
ಭಗವದ್ಗೀತಾಸಾರವಿಚಾರ, ಗೀತಾರ್ಥವಿವರಣೆ, ಜೀವನ್ಮುಕ್ತಿವಿವೇಕ,
ಈಶಸಾರ, ವೇದಾಂತವಿಚಾರದ ಗುಟ್ಟು, ಬ್ರಹ್ಮಾನಂದರು,
ರಾಮನಾಮದ ಮಹಿಮೆ, ಭರತನ ಬಂಧುಪ್ರೇಮ,
ರಾಸಕ್ರೀಡೆ, ಭರತಖಂಡದ ಜೀವಜ್ಯೋತಿಗಳು,
ಝಾಂಸಿಲಕ್ಷ್ಮೀಬಾಯಿ, ಆತ್ಮಶಕ್ತಿಯ ತೇಜಸ್ಸು,
ಆರ್ಯಧರ್ಮಪ್ರದೀಪ, ಗುಣನಿರೂಪಣೆ,
ನೀತಿಗಳ ನೆಲಗಟ್ಟು–ಮೊದಲಾದವು.

# ಉಪೋದ್ಘಾತ

ಭಕ್ತಬೃಂದಾ ? ಈ ಜಗತ್ತಿನಲ್ಲಿ ಭಗವದಾರಾಧನಾ ಕ್ರಮಗಳು ನವವಿಧಗಳಾಗಿರುವುವು. ಅವುಗಳಲ್ಲಿ ನಾಮ ಸಂಕೀರ್ತನೆಯು ಎರಡನೆಯ ಸ್ಥಾನವನ್ನಲಂಕರಿಸಿರುವುದು. ಭಕ್ತರಾದರೋ ಮುಖ್ಯವಾಗಿ ಶಿವ, ಕೇಶವರನ್ನೇ ಹಲವು ಪರಿಯಲ್ಲಿ ಸ್ತೋತ್ರ ಮಾಡಿರುವರು.

ಪ್ರಕೃತ ಕರ್ನಾಟಕಾಂಧ್ರಭಾಷೆಗಳಲ್ಲಿ ಗಾನರೂಪವಾಗಿ ಕೀರ್ತನಗಳನ್ನು ರಚಿಸಿ, ಜನಾಕರ್ಷ ಮಾಡಿ, ಭಕ್ತಿಮಾರ್ಗಕ್ಕೆಳೆದಿರುವ ಕೀರ್ತನ ಕಾರರಲ್ಲಿ ಪುರಂದರದಾಸ್, ಕನಕದಾಸ್, ತ್ಯಾಗರಾಜು ಇವರುಗಳೇ ಸುಪ್ರಸಿದ್ಧರು. ಈ ಮಹನೀಯರುಗಳು ಹರಿಯನ್ನೂ ಮತ್ತು ಶ್ರೀರಾಮನನ್ನೂ ಅನೇಕ ವಿಧವಾಗಿ ವರ್ಣಿಸಿ ಅವರ ಗುಣ, ಕರ್ಮ, ಸ್ವಭಾವಗಳ ತಾರತಮ್ಯವನ್ನು ಭಕ್ತಿರೂಪವಾಗಿ ಹೊಗಳಿರುವರು.

ಮುಖ್ಯವಾಗಿ ಪ್ರಪಂಚಕ್ಕೆಲ್ಲಾ ವಿರಾಟ್ ಸ್ವರೂಪನಾದ ಪರಮಾತ್ಮನೊಬ್ಬನೇ ಎಂದೂ, ಆತನನ್ನು ಅನಂತ ನಾಮಗಳಿಂದ ಕರೆಯುವರೆಂದೂ ಸರ್ವರೂ ಒಪ್ಪಿಕೊಳ್ಳುವರಷ್ಟೆ ? ಹರಿ = ಪಾಪವನ್ನು ಹರಿಸುವನು. ವಿಷ್ಣು = ಸರ್ವವ್ಯಾಪಿ. ಶಿವ = ಶುಭಕರನು ಎಂದು ಅರ್ಥವಾಗುವುದು. ಈ ಹೆಸರುಗಳೆಲ್ಲಾ ಅದ್ವಿತೀಯನಾದ ಆ ಪರಮಾತ್ಮನಿಗೆ ಅನ್ವಯಿಸುವವು.

ವರ್ತಮಾನ ಕಾಲದ ಪ್ರಾಪಂಚಕರಲ್ಲಿ ಶೈವರು ಶಿವನನ್ನೂ, ವೇದಾಂತಿಗಳು ಬ್ರಹ್ಮನನ್ನೂ, ವೈಷ್ಣವರು ವಿಷ್ಣುವನ್ನೂ, ಹೀಗೆ ಭಿನ್ನ ಭಿನ್ನ ಮತದವರು ಭಿನ್ನ ಭಿನ್ನವಾಗಿ ದೇವರಿರುವನೆಂದು ಭಾವಿಸಿ ಆರಾಧಿಸುವರು. ವಿಚಾರಮಾಡಿ ನೋಡಿದಲ್ಲಿ ಸತ್ವ, ರಜಸ್ತಮೋ ಗುಣನಿಯಾಮಕರಾದ ಹರಿ, ಬ್ರಹ್ಮ, ಮಹೇಶ್ವರರಿಗೂ ಅಗೋಚರನಾದ ಮೂಲಮೂರ್ತಿ ಯೋರ್ವನಿರುವನೆಂಬುವುದು ನಿರ್ವಿವಾದವು. ತ್ರಿಮೂರ್ತಿಗಳಲ್ಲಿ ತಮೋಗುಣ ವಿರಾಜಿತನಾದ ಶಿವನು ಸ್ವರೂಪದಿಂದಲೂ, ವರ್ತನದಿಂದಲೂ ವೈರಾಗ್ಯನಿಧಿಯಾಗಿರುವನು.

ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಅದ್ವೈತ ಶಿಖಾಮಣಿಗಳಾಗಿ ಶಿವಾನಂದಲಹರಿ, ಭಜಗೋವಿಂದಂ ಮುಂತಾದವುಗಳಿಂದ ಶಿವ, ಕೇಶವರನ್ನು ಸಮಾನವಾಗಿ ಹೊಗಳಿ ಅಭೇದವೆನ್ನು ಪ್ರಕಟಿಸಿರುವರು.

ಆದರೆ ಕರ್ನಾಟಕ ಭಾಷೆಯಲ್ಲಿ ಗಾನರೂಪವಾದ ಶಿವಕೀರ್ತನಗಳು ಅತಿ ವಿರಳವೆಂಬ ಅಂಶವನ್ನು ಅಲ್ಪಮತಿಯಾದ ನಾನು ತಿಳಿದು "ಶಿವಕೀರ್ತನಗಳೆಂಬ" ಹೆಸರಿನಿಂದ ಭಕ್ತಿರಸ ಪ್ರಧಾನಗಳಾದ ನೂರು ಕೀರ್ತನಗಳನ್ನು ರಚಿಸಿ ಭಕ್ತ ಮಹಾಜನಗಳ ಮುಂದರಿಸಿರುವೆನು. ಈ ಕೀರ್ತನಗಳು ಶಿವಕಥಾ, ಶಿವಪೂಜ, ಶಿವಭಜನೆಗಳಿಗೆ ಮಾತ್ರ ಉಪಯುಕ್ತಗಳೆಂದಲ್ಲ. ಏತಕ್ಕೆಂದರೆ, ಪ್ರತಿಯೊಂದು ಕೀರ್ತನದಲ್ಲಿಯೂ ವರ್ತಮಾನ ಕಾಲದ ವಿಷಯಗಳನ್ನು ಗರ್ಭೀಕರಿಸಿ ದುರಾಚಾರಗಳನ್ನು ಖಂಡಿಸಿ ಸಲಹಬೇಕೆಂದು ಶಿವನಲ್ಲಿ ಪ್ರಾರ್ಥಿಸಿಕೊಂಡಿರುವುದರಿಂದ ಇವು ಸರ್ವಜನ ಸಮಾದರಣೀಯಗಳಾಗಿರಬಹುದೆಂದು

ನಂಬುತ್ತೇನೆ. ಈ ಕೀರ್ತನಗಳನ್ನು ಸುಲಭವಾಗಿ ಗ್ರಹಿಸಲವಕಾಶವಾಗುವಂತೆ ಹರಿದಾಸರುಗಳ ಜನಜನಿತವಾದ ಹಾಡುಗಳ ಧಾಟಿಗಳನ್ನೇ ಹಾಕಿ ಆಯಾಯ ರಾಗ ತಾಳಗಳನ್ನು ಸೂಚಿಸಿರುವೆನು. ಅಲ್ಲದೆ ಕೀರ್ತನವು ಇಂಥಾ ವಿಷಯ ಗರ್ಭಿತವೆಂಬುದನ್ನು ಮನವರಿಕೆ ಮಾಡಲು ಪ್ರತಿಯೊಂದಕ್ಕೂ ಶಿರನಾಮೆ ಹಾಕಿ ವಿಷಯಾನುಕ್ರಮಣಿಕಾ ಸಂಖೆಯನ್ನು ಕೊಟ್ಟಿರುತ್ತೇನೆ.

ಭಕ್ತ ಮಹಾಶಯರೇ! ಅಖಂಡ ತತ್ವವೇತ್ತನಾದ **ಶ್ರೀ ವೇಮಣ್ಣನು**—

ಕಂದ|| ನೀನಾಡಲು ನಾನಾಡುವೆ |
ನೀನಿರಲಾನಿರ್ಪೆನೈದೆನಿರ್ವಿಣ್ಣತೆಯಿಂ ||
ನೀಂ ನೆನೆಯಲ್ ನಾಂ ನೆನೆವೆಂ |
ನೀಂ ನಗಲಾಂನಗುವೆನಯ್ಯನಿಜವಿದುವೇಮಾ ||

ಎಂದು ಹೇಳಿರುವುದರಿಂದ ಸರ್ವ ಚೇತನಾತ್ಮಕನಾದ ಪರಮಾತ್ಮನೇ ಪ್ರೇರಕಕರ್ತೃವಾಗಿ ಆಡಿಸುವನೆಂಬುವುದು ಸತ್ಯವು.

ಈ ಕೀರ್ತನಗಳಾದರೋ ದೈವಾನುಗ್ರಹ ಬಲದಿಂದ ನುಡಿದವುಗಳೇ ಹೊರತು ವ್ಯಕ್ತಿಶಃ ನನ್ನಂಥಾ ಪಾಮರನಿಂದ ಬಂದವುಗಳೆಂದು ಎಣಿಸಲಾಗದು. ನಾನೀಕಾರ್ಯವನ್ನು ಸ್ವಾರ್ಥಕ್ಕಾಗಿ ಮಾಡಿದೆನೋ, ಪರಾರ್ಥಕ್ಕಾಗಿ ಮಾಡಿದೋ, ಕೀರ್ತಿಗೋಸ್ಕರ ಮಾಡಿದೆನೋ, ಮೋಕ್ಷ ಪ್ರಾಪ್ತಿಗೋಸ್ಕರ ಮಾಡಿದೆನೋ ಆ ವಿಷಯವನ್ನು ನಾನಿಲ್ಲಿ ಉದಹರಿಸುವುದಿಲ್ಲ. ಆದರೆ ಕೇವಲ ಭಕ್ತಿ, ಜ್ಞಾನ, ವೈರಾಗ್ಯನಿಧಿಗಳಾದ ದಾಸರ

ಬಳಿವಿಡಿದು ಪೋಗಲನುಕರಿಸಿದುದು ಮಾತ್ರ ತಮಗೆ ಆಶ್ಚರ್ಯ ವಾಗಿ ತೋರಬಹುದು.

ಆಸ್ತಿಕ ಶಿರೋಮಣಿಗಳೇ ! ನಾನೋರ್ವ ದಾಸನೆನಿಸಿ ಕೊಳ್ಳಲಸಮರ್ಥನಾದರೂ ದಾಸರ ಪಾದಧೂಳಿಯೆಂದು ನಿರ್ಭ ಯವಾಗಿ ಹೇಳಬಲ್ಲೆನು. ಅದು ಹೇಗಾದರೂ ಇರಲಿ ನಿಷ್ಪಕ್ಷ ಪಾತ ಬುದ್ಧಿಯಿಂದ ಸ್ತ್ರೀ ಪುರುಷರೆಲ್ಲರೂ ಈ ಕೀರ್ತನ ಗಳನ್ನು ಪಠಿಸಿ ಕಿಂಚಿತ್ ಆನಂದವನ್ನು ಹೊಂದುವುದಾದರೆ ಅಲ್ಲಿಗೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸಿ ಭಗ ವತ್ಪ್ರೀತಿಗೆ ಪಾತ್ರನಾದೆನೆಂದು **ಅಮಂದಾನಂದ** ಪರವಶ ನಾಗುವೆನು.

ಈ ಪುಸ್ತಕವನ್ನು ಕೇವಲ ಸಾಧುಶಿರೋಮಣಿಗಳಾಗಿ ಯೂ, ತತ್ವವಿಚಾರ ಪರರಾಗಿಯೂ ಇದ್ದು, ದೈವಾಧೀನರಾದ ನನ್ನ ಪ್ರಿಯತಂದೆ **ವೇ|| ನಾರಾಯಣರಾಜುಯವರ** ಜ್ಞಾಪ ಕಾರ್ಥವಾಗಿ ಪಿತೃಭಕ್ತಿಯಿಂದ ಅವರ ಆತ್ಮಕ್ಕೆ ಸಮರ್ಪಿ ಸಿರುತ್ತೇನೆ.

ಇಂತು ದಾಸಾನುದಾಸ,

ಬಿ. ಭೀಮರಾಜು.

# ಅಭಿಪ್ರಾಯ.



ಮ|| ಬಿ. ಭೀಮರಾಜು ಅವರು ತಮ್ಮ ಸ್ವಂತ ಸ್ಫೂರ್ತಿಯಿಂದ ಮಾಡಿದ ಕೆಲವು ಮುದ್ರಿತವಾಗಲಿಕ್ಕಿದ್ದ ಶಿವಕೀರ್ತನದ ಹಾಡುಗಳನ್ನು ಓದಿ ತೋರಿಸಿದರು. ವಾಣಿಯಲ್ಲಿ ಒಂದು ವಿಧದ ಪ್ರಸಾದವೂ, ಶೈಲಿಯು ಸುಲಭವೂ ಆಗಿರುವುದಾಗಿ ಕಂಡು ಬಂದಿತು. ಭಕ್ತಿರಸ ಪುಂಜಗಳಾದ ಈ ಕೀರ್ತನಗಳು ಪಠನೀಯಗಳಾಗಿರುವವು.

ರಾಜಹಂಸ,<br>ಧಾರವಾಡ.



ನಾರಾಯಣ ಶರ್ಮ,<br>ಸಂಪಾದಕ.

# ವಿಷಯಾನುಕ್ರಮಣಿಕೆ.

# ಶಿವ ಕೀರ್ತನೆಗಳು.



## ವಿ ಘ್ನೇ ಶ್ವ ರ ಸ್ತು ತಿ.

### ಭಾರತ ವಿಘ್ನನಿವಾರಣ ಪ್ರಾರ್ಥನ.

ನಾಟ—ಅಟತಾಳ (ಲಂಬೋದರ ಎಂಬಂತೆ)

೧. ವಿಘ್ನೇಶ್ವರ ವಿಘ್ನವಿದೂರ ‖ ಪ ‖
ಸುಜ್ಞಾನ ದಾತ ಸರ್ವಜ್ಞ ಪ್ರಖ್ಯಾತ ‖ ಅ ‖

ಆದಿ ಪೂಜೆಯು ನಿನಗಾದಿ ವಂದನವೈದೆ |
ಶ್ರೀಧವ ಹರ ವಿಧಿಗಳು ಮೋದದೆ |
ಆದಿದೇವನೆಂದು ಭೇದರಹಿತನೆಂದು |
ಸಾದರದೊಳಗೆಂದು ಮಾಳ್ಪರು ಬಂದು ‖ ೧ ‖

ಸರ್ವಮಂಗಳೆಯ ಸುಪುತ್ರನು ನೀನಾಗಿ |
ಸರ್ವಮಂಗಳವೀವು ದೇಂಪಿರಿದು |
ಸರ್ವಕಾಲದೊಳು ಭಾರತಮಾತೆಯುದರದಿ |
ಗರ್ವರಹಿತರುದಿಪಂತೆ ನೀ ಮಾಡೈ ‖ ೨ ‖

ಮಾನವ ವರ್ಗವ ನೀನುದ್ಧರಿಸು ದೇವ |
ನಾನು ತಾನೆಂಬಜ್ಞಾನವ ಕಳೆದು |
ಈನೆಲದೊಳಗೆಲ್ಲರು ಸಮವೆಂಬುವ |
ಜ್ಞಾನವೀವುದು **ಭೀಮ**ರಾಜವರದನೇ ‖ ೩ ‖

---

# ವಿರಾಡ್ರೂಪನ ಸ್ತುತಿ

(ನೀನಾಯುದೊಳಗೊ ಎಂಬಂತೆ)

**ಕಾಂಭೋದಿ—ಝಂಪೆ**

೨. ವಿಶ್ವವ್ಯಾಪಕನೆ ವಿಶ್ವಾರಾಧ್ಯನೆ |
ಶಾಶ್ವತಾನಂತ ಸುಖದಾತ ಪ್ರಖ್ಯಾತ ‖ ಪ ‖

ನಶ್ವರದ ದೇಹವಿದಶಾಶ್ವತ ಪ್ರಪಂಚ ಸುಖ |
ಪಶ್ವಾದಿಗಳ ತೆರದಿ ಮಡಿವರಿಳೊಯೊಳ್ |
ವಿಶ್ವಾಸದಿಂದ ಸಲಹುವುದಗೋಚರ ನೀನು |
ವಿಶ್ವೇಶನೆಂಬ ಬಿರುದಾಂತು ಮೆರೆವುದರಿಂ ‖ ೧ ‖

ಪಂಚ ಭೂತಂಗಳನು ಹಂಚಿಕೊಟ್ಟಿಹೆ ನೀನು |
ಹಿಂಚು ಮುಂಚಿಲ್ಲದೆ ಸಮಾನವಾಗಿ |
ವಂಚನೆಯು ನಿನಗಿಲ್ಲ ನಿನ್ನಸುತರಲ್ಲೆ ಪ್ರಾ |
ಪಂಚಿಕರು ಶುದ್ಧ ಪರಿಪೂರ್ಣ ಪರಮಾತ್ಮ ‖ ೨

ಧನ, ಕುಲ, ವಯೋ ಮದದಿ ಘನರೆಂದು ಮೆರೆಯುತ್ತ |
ಗಣಿಸರ್ಥೆ **ಭೀಷ್ಮ** ರಾಜಾರ್ಚಿತ ಮಹೇಶ |
ದಿನಪ ಸುತ ಪ್ರಾಣವನು ಶೆಳೆವಾಗ ನಿನ್ನನ್ನು |
ನೆನೆವರೋ ಘನರೆಂದು ತಾವೆಪೇಳುವರೋ ‖ ೩

---

# ಶಿವ ಕೀರ್ತನ ಮಹಿಮೆ

(ಹಾ ವಿಧಿ ವಿಧಿ ಮುನಿಶಾಪ ಘಟಿಸಿತೇ ಎಂಬಂತೆ)

**ರಾಗ—ಆದಿತಾಳ**

೩. ಶಿವ ಕೀರ್ತನವದು ಪಾವನವು |
ಶಂಕರ ಸಂದರುಶನ ಪಾವನವು || ಪ ||

ಜವನ ಭವಣೆಯ ನೀಗುವುದಿಹದ |
ಭವ ಬಂಧನವಂ ತೊಲಗಿಪುದು |
ಅವಿರಳ ಸುಖವನ್ನೀವುದನಿಶಮುಂ |
ಶಿವಭಕ್ತರ ಸಂಘವ ಸೇರಿಪುದು || ೧ ||

ಕೈಲಾಸವು ವೈಕುಂಠವು ಬಯಲೇ |
ಶೈಲ ಪುರಂಗಳಲ್ಲವು ಮೊದಲೇ |
ಶೂಲಿ ನೀಲ ದೇಹಂಗಳು ಸುಳ್ಳೇ |
ಬಾಲ ರವಿ ಕೋಟಿ ತೇಜವಿದಲ್ಲೇ || ೨ ||

ಶಿವ, ಶಂಕರ ನಾಮವೆ ಶುಭಕರವು |
ತವೆ ನುತಿಸುವರಘ ವಿನಾಶವು |
ಸುವಿ ಮಲ ಮತಿಯನ್ನೀಯುವ ವಿಳೆಯೊಳ್ |
ಕವಿ ಭೀಮಾಖ್ಯ ವರದ ನಾಮವು ತಾಂ || ೩ ||

## ಪಾಪವನ್ನು ಕ್ಷಮಿಸೆಂದು ಪ್ರಾರ್ಥನ

(ನಡು ನೀರೊಳು ಕೈ ಬಿಡುವರೆ ಎಂಬಂತೆ)

ರಾಗ-ಭೈರವಿ—ಆದಿತಾಳ

೪. ಬಿಡಬೇಡವೊ ನೀನೆನ್ನ ಕೈ |
ಮೃಡದೇವ ನಿನ್ನಡಿಗೆರಗುವೆ || ಪ ||

ನಿನ್ನ ನುತಿಯ ಗೈಯ್ಯದೆ ನಾ |
ನನ್ಯದೂಷಣೆ ಗೈಯ್ಯುತಿರ್ದೆ |
ನಿನ್ನ ಭಕ್ತರ ಸೇರದೆ ನಾ |
ನನ್ಯಸ್ತ್ರೀಯರ ಸೇರಿ ನಲಿದೆ || ೧ ||

ನೀಚರಾಶ್ರಯದಿರ್ದು ನಾನು |
ಯಾಚಿಸಿದೆನು ಅಧಮರನ್ನು |
ಶ್ರೀಚರಿತ್ರ ಶಂಭು ನಿನ್ನ |
ಗೋಚರನಾಗಿರದೆ ಬಂದು || ೨ ||

ಸದ ಸದ್ವಸ್ತುಗಳನು ನೀಂ |
ಮುದದಿಂ ಸ್ವೀಕರಿಸದೆ ವಿಷ |
ವದನಂ ಧರಿಸಿದ ತೆರದೊಳು |
ಬುಧ ಭೀಮ ವರದ ಕೈವಿಡಿ || ೩ ||

# ಭಕ್ತ ಪರಾಧೀನತ್ವ

(ಕರುಣಾಕರ ನೀನೆಂಬುದದೇಕೋ ಎಂಬಂತೆ)

**ರಾಗ-ಧನ್ಯಾಸಿ—ಛಾಪು-ಅಟತಾಳ**

೫. ಭಕ್ತಾಧೀನ ನೀನೆಂಬುದ ಕೇಳಿಹೆ |
ನಕ್ತಂಚರ ವೈರಿ || ಪ ||

ಮುಕ್ತಿ ದಾತನೆ, ಶಕ್ತಿ ರಮಣನೆ ವಿ |
ರಕ್ತ ಜನಪ್ರಿಯ ಮಹೇಶನೇ ಶಿವ || ಅ ||

ತರಳ ಮಾರ್ಕಾಂಡೇಯಂ ಗೊಲಿದೆ ಶ್ರೀ |
ಶಿರಿಯಾಳನ ಪೊರೆದೆ |
ನೆರೆ ಮೂರ್ಖನು ಕ್ರೂರಾತ್ಮನೆನಿಸಿದ |
ದುರುಳ ವ್ಯಾಧ ಕಣ್ಣಪ್ಪನ ಸಲಹಿದೆ || ೧ ||

ಭಸ್ಮಾಸುರಗೆ ಹರಿ ಹಸ್ತವಿತ್ತು ಬಹು |
ವಿಸ್ಮಯವನು ತಾಳ್ದೆ |
ಕಶ್ಮಲಚಿತ್ತರ ನಾಶನಗೈಯ್ಯುವ |
ವಿಶ್ವಂಭರ ದೇವ || ೨ ||

ವಿಜಯನ ಶಕ್ತಿ ಭಕ್ತಿಗಳನು ಪರಿಕಿಸಿ |
ನಿಜವ ತೋರಿದೆ ಕೊನೆಗೆ |
ಭಜಕ ಭೀಮ ರಾಜಾರ್ಚಿತ ಜಗದೊಳು |
ಸುಜನ ಪಾಲನೆಂಬುವ ಬಿರುದಾಂತೆ || ೩ ||

# ಭಕ್ತಾಧೀನ್ಯಾಧಿಕ್ಯ

(ಬಿಡೆ ನಿನ್ನ ಪಾದವ ಎಂಬಂತೆ)

ರಾಗ-ಮೋಹನ--ಆದಿತಾಳ

೬. ಬಂದು ಪೀಡಿಪರೆಂದು | ಇಂದುಶೇಖರನೆ ನೀಂ |
ನಂದಿ ಪ್ರಮಥ ಬೃಂದದೊಡಗೂಡಿ || ಪ ||

ಕಂದ ಗಣಪ ಷಣ್ಮುಖಾದಿ ಸತಿಯರೊಡ |
ನಂದದಿ ಬಂಧು ಬಳಗವೆರಸಿ |
ಎಂದಿಗು ಸಿಗದವೋಲಿರಬೇಕೆಂದು ಸಾ, |
ನಂದದಿ ಬೆಟ್ಟದ ತುದಿಯಲ್ಲಿ ನಿಂದಿಹೆ || ೧ ||

ಸತಿಯ ಪಕ್ಕದೊಳೊಂದು ಅತಿಕ್ರೂರಸಿಹ್ಮವು |
ಸುತನ ಮುಖವು ಮುದಿಸಿದ ಗಜವು |
ಜ್ಯತೆಗೆ ನಿನ್ನಂಗಗಳೊಳು ವಿಷಸರ್ಪಗಳ್ |
ಭೀತಿಗೊಳಿಸೆ ಕಾವಲಿಟ್ಟಿಹೆಯಲ್ಲವೆ || ೨ ||

ಭಕ್ತಾಧೀನ ನೀಂ ಭೀಮ ರಾಜಾರ್ಚಿತ |
ಯುಕ್ತಿಯದೊಂದು ಸಾಗದು ನಿನ್ನದು |
ಭಕ್ತಿ ನಿನ್ನೊಳ ಗಿರಿಸುತಲಡವಿಯೊಳಿರೆ |
ರಿಕ್ತನಂದದಿ ಬೆಟ್ಟವಿಳಿದೋಡಿ ಬರುವೆ ನೀಂ || ೩ ||

## ಮಹಿಮಾತಿಶಯ

(ಎಂದಿಗಾಗ್ವದೊ ತಂದೆಯೆ ನಿನ್ನ ಎಂಬಂತೆ)

ಜಂಝೂಟಿ—ಆದಿತಾಳ

೬. ಕಾಮನನ್ನು ದಹಿಸಿನೀಂ ನಿಷ್ಕಾಮಿಯಾದೆಯೈ || ಪ ||

ಕಾಮಿಯೆಂಬರರ್ಧನಾರೀಶ್ವರ ನೀನಾದುದರಿಂ || ಅ ||

ಬೆಳ್ಳಿ ಬೆಟ್ಟದಲ್ಲಿ ವಾಸಿಸುತ ಲನುದಿನ |
ಒಳ್ಳೆ ಮಿತ್ರ ಧನಪನಿದ್ದು ಬಿಕ್ಷವೇಕಿನ್ನ || ೧ ||

ಬಹು ಕುಟುಂಬಿಯಾಗಿ ತೋರ್ಪೆನಿನ್ನ ಪರಿಕಿಸೆ |
ಸಹಜ ಸರ್ವ ಚೇತನಾತ್ಮಕನಾಗಿ ರಂಜಿಪೆ || ೨ ||

ನಿನ್ನ ಲೀಲೆಯನ್ನು ಬಣ್ಣಿಸುವುದಸಾಧ್ಯವೈ |
ಪನ್ನಗ ಭೂಷಣನೆ **ಭೀಮ** ರಾಜ ವರದನೇ || ೩ ||

---

# ಶಂಕಾ ನಿರೂಪಣ

(ಮಾತಾಡ ಬಾರದೇನೋ ಎಂಬಂತೆ)

ರಾಗ—ಕಮಾಚು—ಆದಿತಾಳ

೮. ಏತಕ್ಕೆ ಮೌನದಿಹೆ । ಭೂತಪತಿನೀ ॥ ಪ ॥

ಮುನಿ ಜನ ಹೃದಯದೊ । ಳನಘ ನೀನಿಹ ನೆಂಬ ।
ರನುದಿನ ಸುಜನರ । ನೆರೆಯೊಳಿರುವ ನೆಂಬರ್ ॥ ಅ ॥

ನುಡಿವುದೆನ್ನೊಳು ನೀನು । ಪಿಡಿವೆ ನಿನ್ನ ಪದವನ್ನು ।
ಮೃಡ ನೀನಿರುವೆ ಯೆಂದು । ಬಿಡದೆ ಸಾರುವೆನಯ್ಯ ॥೧॥

ಶಿವ ಕೀರ್ತನವ ಮಾಡುವೆಡೆಗೆ ನೀಂ ಪೋದೆಯ ।
ಶಿವ ಭಕ್ತರಿರುವ ಕಡೆಯೊಳು ವಾಸಿಸುವೆಯ ॥ ೨ ॥

ಬೇಡುವೆಯನ್ನಯ್ಯ । ಕಾಡಿಸದಿರೊ ಜೀಯ ।
ನೋಡು ದಯದಿ **ಭೀಮ** ರಾಜ ವರದ ದೇವ ॥ ೩ ॥

---

## ಹರ ನರ ಸ್ತುತಿಯ ತಾರತಮ್ಯ

(ಕೊಡುವ ಕರ್ತೃ ಬೇರೆ ಎಂಬಂತೆ)

ರಾಗ-ಸುರುಟಿ—ಅಟತಾಳ

೯. ತೊರೆದು ನಿನ್ನ ಸ್ಮರಣೆ |
ಅನ್ಯಮನುಜರನು ಪೊಗಳುವರು |
ಶರಣಾಗತ ವತ್ಸಲನೆಂಬುದನಂ |
ಮರತು ದುರುಳರನು ಸೇವಿಸುತಿರುವರು || ಪ ||

ನರಸ್ತುತಿ ಪಾಪಮದು |
ಹರಸ್ತುತಿ ಪರಮ ಪದ ವೀವುದು |
ನಿರುತ ಭಜಕರಘವನು ಪರಿಹರಿವುದು |
ಪರಮ ಪಾವನ ಮಂಗಳ ಕರ ನಾಮವು || ೧ ||

ಇಂದ್ರ ಚಂದ್ರನೆಂದು ಪೊಗಳ್ವರು |
ಮಂದ ಭಾಗ್ಯ ನರರು |
ಸುಂದರನೆಂಬರು ಕುರೂಪಿಯಾದರುಂ |
ಪೊಂದಿ ಅಲ್ಪ ಫಲ ನೀಚ ಮನುಜನಿಂ || ೨ ||

ಕಾಮಿತಾರ್ಥವೀವ |
ಕಾಮಧೇನುವ ನುಳಿದಜ್ಞರು ತಾವ್ |
ಪ್ರೇಮಿಸುವರು ಬಂಜೆಯ ಹಸುವನು ನೆರೆ |
ಭೀಮರಾಜ ವರದನೆ ತಾಮಸದೊಳು || ೩ ||

# ಗರ್ಭಸ್ಥ ಶಿಶು ಪ್ರಲಾಪ

(ಎಂತ ವೇಡುಕೊಂದುರಾಘವ ಎಂಬಂತೆ)

**ಸರಸ್ವತೀಮನೋಹರ—ಆದಿತಾಳ**

೧೦. ಏಕೆ ನಿರ್ದಯ ವೋ ಶಂಕರ |
ವ್ಯಾಕುಲವ ದೇಶಕೆ ಶುಭಕರ || ಪ ||

ಸಾಕು ಸಾಕು ಈ ನರ ಜನ್ಮವು |
ನೂಕಿ ಕೀಳುವವು ಕ್ರಿಮಿ ಜಾಲಗಳು || ಅ ||

ಜಠರಾಗ್ನಿಯೊಂದೆಡೆ ಬೇಯುವುದು |
ಕಟುವಾಗಿದೆ ದುರ್ಗಂಧವು |
ಕಟ ಕಟ ನವ ಮಾಸಗಳವು |
ನಿಟಿಲಾಕ್ಷ ನವ ಯುಗವೆಂಬೆನೋ || ೧ ||

ಕಡೆಹಾಯಿಸೆನ್ನ ಮೃಡದೇವನೆ |
ಪಿಡಿವೆನು ನಿನ್ನ ಪಾದವನು |
ಪೊಡವಿಯೊಳ್ಸದ್ಗುರುವನ್ನು ಸೇರಿ |
ತೊಡೆಯುವೆ ನೀ ಜಡದೇಹವ || ೨ ||

ಸೋಮ ಮೌಳಿ ನಿನ್ನ ನಾಮ ಸ್ಮರಣೆಯ |
ಪ್ರೇಮದಿಂ ಕೊಡೈ ಭೀಮರಾಜ ನುತ |
ಶ್ರೀಮದಖಿಲಾಂಡ ಕೋಟಿ ನಾಯಕ |
ಸ್ವಾಮಿ ಬಂಧನದಿಂ ಕಡೆಹಾಯಿಸೈ || ೩ ||

## ವರ್ತಮಾನ ಕಾಲ ನಿರೂಪಣೆ

(ಎಲ್ಲಿರುವೆ ತಂದೆ ಬಾರೋ ಎಂಬಂತೆ)

ರಾಗ-ಬೆಹಾಗ್—ಆದಿತಾಳ

೧೧. ಉದ್ಧರಿಪುದೈ ಲೋಕವ | ಸದ್ಧರ್ಮದಿ ನೀ | || ಪ ||

ಬದ್ಧವೆ ಅಬದ್ಧವು ವಿರುದ್ಧವೆ ಪ್ರಬಲವು |
ಬದ್ಧಾದರದೊಳು ಪರಿ | ಶುದ್ಧ ಮಾಡುತೀಗ ನೀನು || ಅ ||

ಷಡ್ರಿಪುಗಳ್ ನರರಿಗೆ | ಒಡ್ಡಿಹರು ಬಲೆಯನು |
ಅಡ್ಡಗಿಸಿ ಪಾಶವನು | ಖಡ್ಗದೊಳು ಕತ್ತರಿಸಿ || ೧ ||

ಜಾತಿ ಮತ ನೀತಿ ಕುಲ | ಏ ತೆರದ ಮತ್ಸರದಿ |
ಕಾತರಿಸುತನಿಶವು | ಭೀತಿಗೊಳಿಸುವು ದೀಗ || ೨ ||

ಹಿಂದು ಮುಹಾ ಜನಗಳೊಳೆಂ | ದೆಂದಿಗು ಸೌಹಾರ್ದ್ರವ |
ತಂದೆ ಕೊಡು **ಭೀಮ**ರಾಜ|ವಂದಿತ ದಯಾ ಸಿಂಧುವೆ ||೩||

# ಶಿಷ್ಟ ರಕ್ಷಣ ದುಷ್ಟ ಶಿಕ್ಷಣ

(ರಾಮುನೀ ಸಮಾನ ಮೆವರು ಎಂಬಂತೆ)

ಖರಹರ ಪ್ರಿಯ—ರೂಪಕ

೧೨. ಈಶ ನಿನ್ನ ಪೋಲ್ವರಿಲ್ಲ |
ಭಾಸುರಾಂಗ ಕರುಣಾಕರ || ಪ ||

ಶ್ರೀ ಶಾರ್ಚಿತ ಪಾದ ಯುಗಳ ಶ್ರೀ |
ವಾಸವ ಮನು ಮುನಿ ವಂದಿತ || ಅ ||

ದುಷ್ಟರನ್ನು ವಧಿಸಿಜಗದಿ |
ಶಿಷ್ಟರನ್ನು ಪಾಲಿಸಿದೆ |
ಅಷ್ಟ ಮೂರ್ತಿ ನಿನ್ನ ಭಜಕರ |
ಕಷ್ಟಗಳನು ನೀಗಿ ಕಾಯ್ದೆ || ೧

ಪರಮ ಪುರುಷ ಪಾವನಾತ್ಮ |
ಪೊರೆವುದೆಂದು ಬೇಡುವೆನ್ನೈ |
ಶರಣ **ಭೀಮ**ರಾಜ ವರದ ಶ್ರೀ |
ಗುರುವರ ಪರಶಿವ ಶುಭಕರ || ೨

## ಶರಣಾಗತ ವತ್ಸಲತ್ವ

(ವರಮುಲೊಸಗಿ ಬ್ರೋಚುಟ ಎಂಬಂತೆ)

### ಭೈರವಿ—ಆದಿತಾಳ

೧೩. ಶರಣು ಜನರ ಪೊರೆಯುವೆ ಯೆಂ |
ದರಿತಿಹೆ ಗಿರಿಜಾ ರಮಣ || ಪ ||

ಮರೆಹೊಕ್ಕೆನು ನಿನ್ನನು ನಾಂ |
ಹರಿ ಸುಳಿಸಿ ದೊಡದು ನಿನ್ನದು || ಅ ||

ಮಂದ ಮತಿಯು ನಾನಾಗುತೆ |
ಬಂಧನದೊಳು ಶಿಲುಕಿದೆ ನೈ |
ಕಂದನೆಂದು ಕಾಣುತ ನಿನ್ನ |
ಸುಂದರಾಶ್ಯವನ್ನು ತೋರಿ |
ದಂದುಗವನು ಪರಿಹರಿಸುತ |
ಕುಂದನೆಣಿಸ ಬೇಡ ದಯಾ |
ಸಿಂಧು **ಭೀಮ**ರಾಜ ವರದ || ೧ ||

# ಲೀಲಾ ಮಾನುಷ ವಿಗ್ರಹ

(ವಿಡೆಮು ಸೇಯಾವೇ ಎಂಬಂತೆ)

ಖರಹರಪ್ರಿಯ—ಆದಿತಾಳ

೧೪. ಹುಟ್ಟಿದ್ದದು ಯೆಲ್ಲಿ ನೀನು |
ಬೆಳದುದ್ದದು ಯೆಲ್ಲಿ |
ಗುಟ್ಟುಯೆಲ್ಲ ರಟ್ಟುಮಾಡೈ |
ದೃಷ್ಟಿ ಮೂರುಳ್ಳವನೆ ಬೇಗ || ಪ ||

ಸತಿ ಸುತ ಹಿತರು ಬಂಧು ಬಳಗ |
ಜ್ವತೆಗೂಡಿ ವಾಸಿಸುವುದೆಲ್ಲಿ |
ಪತಿತ ಪಾವನ ಪರಮ ಪುರುಷ |
ಮತಿಹೀನ ನಾ ನರಿಯಲಳವೆ || ೧ ||

ಬಹು ಲಂಪಟದೊಳು ಶಿಲುಕಿಹೆ ಯೆಂದು |
ಗಹ ಗಹಿಸುತೆ ನಗುತಿಹರ ವನಿಜನರ್ |
ತಹತಹ ಪಡುವೆ ಕುಟುಂಬ ಕಲಹದೊಳ್ |
ಅಹಿ ಭೂಷಣ ಯೇಂ ಚಿತ್ರ ವಿಧೀಗಳ್ || ೨ ||

ಲೀಲಾ ಮಾನುಷ ವಿಗ್ರಹನಾಗಿ |
ಕೋಲಾ ಹಲ ವನು ಗೈಯ್ಯುವೆ ಜಗದಿ |
ನೀಲಕಂಠ ನಿಗಮಾಗಮ ವಂದಿತ |
ಶೂಲಿ ಭೀಮ ರಾಜಾರ್ಚಿತ ಪುರಹರ || ೩ ||

# ಈಶ್ವರ ಸ್ವರೂಪದಿಂದ ಹೊಂದಬಹುದಾದ ವೈರಾಗ್ಯ

(ಪಿಳ್ಳಗೋವಿಯ ಚಲ್ವಕೃಷ್ಣನ ಎಂಬಂತೆ)

ಶ್ರೀರಾಗ—ಅಟತಾಳ

೧೫. ಬಿದ್ದು ಹೋಗುವ ಕಾಯವೆಂದು |
ಪ್ರಸಿದ್ಧಗೈವುದಕೆ |
ಶುದ್ಧ ನಿರ್ಗುಣನಪ್ಪ ಪರಶಿವ |
ಬುದ್ಧನಾಗಿರುತಿರುವ ಜಗದೊಳು ‖ ಪ ‖

ಹೊದ್ದಿಹುದು ಗಜ ಚರ್ಮ ತಾನುಟ್ಟದ್ದು ಹುಲಿ ದೊಗಲು|
ಮೆದ್ದಿಹುದು ವಿಷ, ವದ್ಭುತದ ಸರ್ಪಗಳು ಮೈಯ್ಯಲ್ಲಿ |
ಬದ್ಧ ರಕ್ತದ ತಲೆಬುರುಡೆಗಳ ಹಾರ ಕೊರಳಲ್ಲಿ |
ಭದ್ರಕಾಳಿಯ ಮುದ್ದು ಪ್ರಿಯ ನೆನಿಸಿರ್ಪ ಜಗದಲ್ಲಿ ‖ ೧ ‖

ಎಂದಿಗಾದರು ವಂದು ದಿನ ಬೆಂದುರಿವ ಕೊಂಪೆಯು ತಾ |
ನೆಂದು ತೋರಲು ಭಸಿತವನು ಧರಿಸಿದನು ಮೈಯ್ಯಲ್ಲಿ |
ನಿಂದ ಮಸಣದಿ ಕೊನೆಯ ಸ್ಥಾನವಿದೆಂದು ಸೂಚಿಸಲು |
ತಂದೆ ಶಿವ ವೈರಾಗ್ಯ ನಿಧಿ ಸಂದೇಹ ವೇನಿದಕೆ ‖ ೨ ‖

ಹಾರ ಹೀರಾವಳಿಗ ಳೊಂದುಂ ಬಾರವೆಂಬುದನಂ |
ಸಾರುತಿರ್ದರು ಮಣಿಮಯದ ತೊಡವುಗಳ ನಾಸಿಪರು |
ನಾರಿ ಪುರುಷರು ಸದ್ಗುಣಾಭರಣಗಳ ನಾಸಿಸರು |
ಮಾರರಿಪು ನಿನ್ನ ಸೇರಿ ಬದುಕುವ ದಾರಿತೋರಿಸು **ಭೀಮ**
ವರದನೆ ‖ ೩ ‖

## ಉತ್ಕ್ರಮಣ ಕಾಲದ ಸ್ತುತಿ

(ಎಲ್ಲಡಗಿದನೋ ಹರಿ ಎಂಬಂತೆ)

**ರಾಗ-ತೋಡಿ—ಛಾಪು**

೧೬. ಎಲ್ಲಡಗಿರುವೆ ದೇವ |
ಮಹಾನುಭಾವ || ಪ ||

ಎಲ್ಲಿ ಕೇಳಲು ನಿನ್ನ | ಬಲ್ಲೆವೆಂಬುವರಿಲ್ಲ |
ನಿಲ್ಲದೆ ಯಮ ಬಂದು | ಸೊಲ್ಲಡಗಿಪನಲ್ಲ || ಅ ||

ಕಾಲಕಾಲನು ನೀನು | ಶೂಲಿ ಪಾಲಿಪುದಿನ್ನು |
ಕಾಲನ ಕೋಲಾಹಲವ ತಡೆ ಯನ್ನಯ್ಯ || ೧ ||

ಅವಸಾನ ಕಾಲದಿ | ಶಿವ ನಿನ್ನ ಮರೆತರೆ |
ಜವನು ಭವಣೆ ಗೈವ| ರವಿ ಶಶಿ ನೇತ್ರನೆ || ೨ ||

ನಮಃಶಿವಯೆಂಬುವ | ಕ್ರಮದ ಪಾಠವನಿತ್ತು |
ಭ್ರಮೆಯ ಕಳೆ ಯೊ | **ಭೀಮ**ರಾಜ ವರದ ಶಂಭು || ೩ ||

---

## ಅಸಂಗತ ಲೋಕ ವ್ಯಾಪಾರ.

(ಹರಿಯೇ ನಿನ್ನೊರತು ಎಂಬಂತೆ)

ಕಲ್ಯಾಣಿ—ಆದಿತಾಳ

೧೭. ಹರನೇ ವರ ಮೌನಿ ಹೃದಂಬುಜ ಭಾಸ್ಕರನೆ ಹರನೇ ||ಪ||

ಕಾಕ ಮನುಜರನೇಕರಾದರು |
ವ್ಯಾಕುಲವ ಪಡಿಸುವರು ಸುಜನರ ||
ಸಾಕು ಸಾಕು ಲೋಕದವಿವೇಕಿಗಳ ನೆರೆಯೊಳು |
ನೂಕಲಾಗದಯ್ಯ ನೀ ವಿವೇಕವಿತ್ತು ಪೊರೆ ಹರನೇ ||೧||

ವಾವೆ ವರಸೆಗಳಾವುದೊಂದನು |
ಕೋವಿದರು ಸಹ ಲೆಕ್ಕಿಸದಿಹರು ||
ಭಾವಜನ ಕೊಂದೆ ಯೆಂದು ದೇವನೆ ಪೇಳುವರಲ್ಲ |
ಭಾವಜಾತನಲ್ಲದೆಮತ್ತಾವನಿಂತು ಗೈವ ಹರನೇ ||೨||

ಬಂಧನವು ಧರೆ ತಂದೆ ನಿನ್ನನು |
ಪೊಂದದಾತನೆ ಮಂದ ಭಾಗ್ಯನು ||
ಇಂದುಚೂಡ ನಿನ್ನ ಪಾದ ದ್ವಂದ್ವವನುಕರುಣಿಪು |
ದಿಂದು **ಭೀಮ** ವರದ ಮುಕುಂದ ಪ್ರಿಯಭವ ಹರನೇ ||೩||

# ಸರ್ವಾಧಿಕಾರಿ.

(ನೀನೆ ಅನಾಥ ಬಂಧು ಎಂಬಂತೆ)

ತೋಡಿ—ಆದಿತಾಳ

೧೮. ನೀನೆ ಸರ್ವಾಧಿಕಾರಿ | ಪರಿಕಿಸೆ ಪುರವೈರಿ ||ಪ||

ನಿನ್ನಾಜ್ಞೆಯು ಯೆಳ್ಳನಿತು ತಪ್ಪದೈ |
ತನ್ನಷ್ಟಕೆ ತಾಂ ರವಿ ಯುದಯಿಪನೈ |
ಪನ್ನಗ ಭೂಷನೆ ವಾಯು ಚಲಿಪುದೈ |
ನನ್ನಿಯೊಳಗ್ನಿಯು ಪ್ರಜ್ವಲಿಸುವನೈ ||೧||

ತರು ಗುಲ್ಮ ಲತಾದಿಗಳು ಪೊಳೆವುವು |
ಪರಿ ಪರಿ ಜೀವಿಗಳ್ಜನಿಸಿ ಲಯಿಪವು |
ನೆರೆ ನಿನ್ನದ್ಭುತ ಮಹಿಮೆಯನರಿಯಲ್ |
ಧರಿಣಿಯೊಳಾರಿಗುಮುಳವಲ್ಲವು ಕೇಳ್ ||೨||

ಅಲ್ಪ ನರನಿಗಧಿಕಾರ ಬಂದೊಡವ |
ನೆಲ್ಲರಿಗುಂ ಸಂಕಟವನ್ನೀಯುವ |
ಬಲ್ಲಿದ ಪರಶಿವ ಭೀಮ ವರದ ನೀ |
ನಲ್ಲದೆ ಜಗದೊಳಗುಂಟೆ ಅಧಿಕರಹ ||೩||

## ದೇಹವೆಂಬ ನನ್ನ ಮನೆ.

(ದೇವ ಬಂದನಮ್ಮ ರಂಗ ಎಂಬಂತೆ)

ಶಂಕರಾಭರಣ—ಆದಿತಾಳ

೧೯. ಬಾಣನ ಮನೆ ಬಾಗಿಲ ಕಾಯ್ದಂದದಿ |
ಸ್ಥಾಣುವೆ ಯನ್ನಮನೆ ಬಾಗಿಲ ಕಾಯೋ ||ಪ||

ಬಾಣನಂತೆ ನಾಂ ಜಾಣನಲ್ಲವೋ |
ತ್ರಾಣವಿಲ್ಲವನನಂತೆ ವಲಿಸಲು ||ಅ||

ನನ್ನ ಮನೆಯೊಳ್ಸಿರಿ ಸಂಪತ್ತಿಲ್ಲವು |
ಸಣ್ಣ ಸಣ್ಣ ನವ ದ್ವಾರಗಳಿಹವು |
ಇನ್ನುಬಿದ್ದು ಹೋಗುವುದೆನ್ನಯ ಮನೆ |
ನಿನ್ನ ದೃಷ್ಟಿ ಯಿರಬೇಕೈ ದೊರೆಯೇ ||೧||

ಒಳಗೆ ನಾರುವ ಮನೆ ಕೊಳೆತು ಹೋಗುವ ಮನೆ |
ತೊಳೆದರೆ ಹೊರಗೆ ಹೊಳೆಯುವ ಮನೆ |
ತಳಹದಿ ಬಿಗಿಯಾಗಿಲ್ಲದಿರುವ ಮನೆ |
ಘಳಿಗೆಯೊಳ್ ಹೋಗುವ ಮನೆಯ ನೀನೋಡೈ ||೨||

ತೊಲೆ ಜಂತೆಗಳೆಲ್ಲವು ಸಡಲಿದವು |
ಬಿಲಗಳು ಬಿದ್ದವು ಗೋಡೆಯೋಳ್ ಹಲವು |
ಸುಲಭವಲ್ಲ ಸರಿ ಮಾಡಲಾರೆನೋ |
ಒಲಿದು ನೋಡು ಭೀಮರಾಜ ವರದನೇ ||೩||

# ನಾಮ ಸಂಕೀರ್ತನ.

(ಹಿ ಮಾ ಚ ಲ ತ ನ ಯ ಎ ಂ ಬ ಂ ತೆ)

ಆನಂದಭೈರವಿ—ಆದಿತಾಳ

೨೦. ಉಮಾಪತಿ ಶಂಭು ಶ್ರೀ |
ರಮಾಪತಿ ಮುಖ್ಯ ಸುಮನಸ ವಂದ್ಯ ||ಪ||

ನಮಾಮಿ ತವ ಪದ ಕಮಲಕ್ಕನಿಶಂ |
ಕು ಮಾನವಗರ್ವ ತಮೋದ್ಯುಮಣಿ ಸಮ ||ಅ||

ಬುಧಾ ! ಸಂಮುದಾ, ಶ್ರಿ
ತವರದ, ಪಾಹಿ ಪುರಾರಿ ಪರಮಪದ,
ವಸು ಸಂಪದ, ಕೊಡು ಸರ್ವದಾ,
ಮದನವಿರೋಧಿಯೆ ಸದುಹೃದಯನು ನೀಂ ||೧||

ಹರಾ ! ಸುರುಚಿರ, ಗುರುವರ,
ವಿಧೇಯಾಬ್ಜ ಮಿಹಿರ |
ಕರುಣಿಪುದು | ಸ್ಮರಣೆಯನು |
ನಿರುತ **ಭೀಮ**ರಾಜ ವರದ **ಮ**ಹೇಶನ ||೨||

## ಶಿವ ಪ್ರಭಾವ.

(ಬಂದಾ‌ದುಗುಡವೇನಿದು ಎಂಬಂತೆ)

ಕಲ್ಯಾಣಿ—ಆದಿತಾಳ

೨೧. ಆದಿ ಮಧ್ಯಾಂತ ರಹಿತನೆ ‖ ಭೇದ ವಿದೂ
ರನೆ ಶ್ರೀ ಮಧುಸೂದನ ಹಿತ ಸಾಧುನಮಿತ ‖ಪ‖

ಮಾಧವ ವಿಧಿಗಳು । ವಾದವ ಗೈಯ್ಯುತೆ
ಕ್ರೋಧದಿ ನಿನ್ನನು । ಭೇದಿಸಲೆಳಸುತೆ ‖
ಹಾದಿಕಾಣದಾದರು ಪರ
ವಾದಿ ಗಜಾಂಕುಶಸಮುಹರ ‖೧‖

ಶರಣಜನಾ । ದರಣಘನ ।
ಕರುಣಿ ಮನ । ಗಿರಿಸದನ ‖
ದುರುಳ ತ್ರಿಪುರ ಹರಣ ಹಸನ ।
ಸುರ ಮನು ಮುನಿ ನಮಿತಚರಣ ‖೨‖

ಶಂಕರ, ಭಕ್ತವ ಶಂಕರ ರಿಕ್ತಸು ।
ಖಂಕರ, ಶಕ್ತರಹಂಕರ ತ್ಯಕ್ತಸದಾ ‖
ಕಿಂಕರ ಭೀಮನ ಸಂಕಟವಂ
ನೂಂಕುವ ನಿರ ಹುಂಕಾರ ‖೩‖

## ಅರೂಪ ಸರೂಪತ್ವ.

(ದಾಳವಾಡೊ ಸುಂದರಾಂಗ ಎಂಬಂತೆ)

ನಾಟುಕುರಂಜಿ—ಆದಿತಾಳ

೨೨. ಯಾರು ಬಲ್ಲರಿಂದು ನಿನ್ನ ರೂಪವ |
ಸಾರುತಿದೆ ವೇದ ರೂಪರಹಿತ ನೆಂದು ||ಪ||

ಒಂದು ಪಟದೊಳ್ನಿನ್ನ | ನಂದಗೊಳಿಸಿಹರು |
ಒಂದು ಪಟದಿ ಬೇರೆ | ಹೊಂದಿಸಿ ಬರೆದರು ||ಅ||

ಕರದೊಳು ತ್ರಿಶೂಲ | ಶಿರದೊಳ್‌ರುಂಡಮಾಲ |
ವರ ಜಟೆಯೊಳು ವ್ಯಾಳ | ಧರಿಸಿಹ ಶಶಿಫಾಲ ||೧||

ಜಡೆಯೊಳ್ ಗಂಗೆಯುನ್ನು | ತೊಡೆಯೊಳ್ ಗೌರಿಯುನ್ನು |
ಸುಡುವ ಪಣೆಗಣ್ಣನ್ನು ಬಿಡದೆ ಬರೆದ ರಿನ್ನು ||೨||

ನಾಮ ರೂಪರಹಿತ | ಕಾಮವೈರಿಖ್ಯಾತ |
ಭೀಮರಾಜ ನಮಿತ | ಸ್ವಾಮಿ ಗೌರಿನಾಥ ||೩||

# ಸಂಸಾರ ಬಂಧನ.

(ಸೊಲ್ಲುಸೊಲ್ಲಿಗೆ ಶ್ರೀಹರೀ ಎಂಬಂತೆ)

ದೇವಗಾಂಧಾರ—ಅಟತಾಳ

೨೩. ಬಾರೋ ಬಾಬಾ ಶಂಕರ |
ತೋರಿಸು ನಿನ್ನ ಚಾರು ರೂಪವ ಶ್ರೀಕರ ||ಪ||

ಘೋರ ಸಂಸಾರ ಕೀರಾರಣ್ಯದೊಳು ಸೇರಿ |
ದಾರಿಯ ಕಾಣದೆ ಚೀರುವೆ ಮಾರಾರಿ ||ಅ||

ಹೆಂಡಿರು ಮಕ್ಕಳು ಕಂಡದ್ದ ಕೋರುತೆ |
ದಿಂಡುಗೆಡಿಪರಯ್ಯ ಖಂಡ ಪರಶುವೆ |
ಕೊಂಡು ಬಾರದಿರೆ ಕಂಡ ಕಂಡವರೊಳು |
ಭಂಡನೆಂದು ದೂರುವರಯ್ಯ ದೇವಾ ||೧||

ಸಾಕು ಸಂಸಾರದ ಸಾರವನರಿತೆನು |
ವ್ಯಾಕುಲ ಪಡಲಾರೆ ನೋ |
ಲೋಕೇಶ ನೀನು ಅಪಾರ ಕುಟುಂಬಿಯು |
ಬೇಕಾದುದನು ಕೊಡಬಲ್ಲ ಸಮರ್ಥನು ||೨||

ಹೊರಲಾರೆ ನೀ ಭಾರ ಶಿರವುಳುಕಿತು ಭರ |
ಕರುಣಿಪುದಯ್ಯ ಹರ |
ನೆರೆ ನಿನ್ನ ನಂಬಿದೆ **ಭೀಮ**ವರದ ಮುದ |
ನೆರಸಿ ಪಾಲಿಸಿ ಕೀರ್ತಿಗಳಿಸೋ ಯನ್ನಯ್ಯ ||೩||

# ಬಾಹ್ಯಾಡಂಬರ.

(ನಗೆಯು ಬರುತದೆ ಯನಗೆ ಎಂಬಂತೆ)

ಶಂಕರಾಭರಣ—ರೂಪಕ

೨೪. ಏನು ಚೋದ್ಯವು ತಾ ನಿನ್ನೇನಾಶ್ಚರ್ಯವು |
ಮಾನಿತರೆಂದೆಂಬ ಜನರು ನಾನಾಪರಿಯೊಳ್ ಮಾಳ್ಪ ಚರ್ಯ||ಪ||

ಹೊಲೆಯ ಬಂದನೆಂದು ದೂರ |
ತೊಲಗು ತೊಲಗುಯೆನ್ನುವರು |
ಹೊಲೆಯಗು ತಮಗಿರುವ ಭೇದ |
ಸುಲಭವಾಗಿ ತಿಳಿಯರವರು ||೧||

ಮುಟ್ಟು ಮುಟ್ಟೆನುತ್ತೆ ನೀರೊಳ್ |
ಥಟ್ಟನೆ ಮುಳು ಮುಳಿಗೇಳುವರ್ |
ಮುಟ್ಟಿನಲ್ಲಿ ಹುಟ್ಟಿ ಬಂದ |
ಗುಟ್ಟು ರಟ್ಟು ಮಾಡದಿಹರು ||೨||

ಶೂಲಿಯನ್ನು ನೆನೆಯುವವನು |
ಶೀಲ ಸಂಪನ್ನ ನವನು |
ಮೇಲು **ಭೀಮ**ರಾಜ ವರದ |
ಕಾಲ ಕಾಲನೋಲಗ ವೇ ||೩||

## ಅಪರಾಧ ಕ್ಷಮಾ ಪ್ರಾರ್ಥನೆ.

(ಅಪರಾಧಿ ನಾನಲ್ಲ ಎಂಬಂತೆ)

### ರಾಗ ಪೀಲು—ಅಟತಾಳ

೨೫. ಲಂಚಗುಳಿಕನಾಗಿ ವಂಚನೆಯನುಗೈದೆ |
ಪಂಚಶರಾರಿ ಯನ್ನಪ್ಪ ನೀನೇ |
ಮಿಂಚಿಗಳಿಸಿದ ಪಾಪ ಸಂಚಯುವನು ನೀಗಿ |
ಅಂಚಿತ ಧರ್ಮವ ಬೋಧಿಸೆನ್ನಯ್ಯ ||ಪ||

ಮನದೊಳಗೊಂದನು ಮಾತಿನೊಳ್ಮತ್ತೊಂದ |
ನನುವಿನಿಂ ಕಾರ್ಯದೊಳೊಂದನು ತೋರಿ |
ಘನ ಮಹಿಮನೆ ದುರಾತ್ಮನು ನಾನೆಂದೆನಿಸಿದೆ |
ಚಿನುಮಯರೂಪ ಕ್ಷಮಿಸಿ ಕಾಯೊ ದೇವಾ ||೧||

ಅಗ್ರವರ್ಣಜನೆಂಬತ್ಯುಗ್ರ ಗರ್ವದೊಳು ದು |
ರಾಗ್ರಹ ಪ್ರತಿನಿವಿಷ್ಟಿತನಾಗಿ ನಾ |
ನಜ್ಞರನೆಲ್ಲ ಸುಜ್ಞರಗೈಯ್ಯಲಿಲ್ಲವೋ |
ಪ್ರಜ್ಞೆಯಿತ್ತೆಚ್ಚರಿಸಿದೆ ನೀನೆನ್ನಯ್ಯ ||೨||

ಸರ್ವಮಯನೆ **ಭೀಮ**ರಾಜ ವರದದೇವ |
ಉರ್ವಿಯನೆಲ್ಲ ಪಾಲಿಸುತಿರುವೆ |
ಶರ್ವನಿನ್ನಯ ಸರ್ವ ಸಮಭಾವವರಿತು ನಾಂ |
ಗರ್ವ ಪರ್ವತವಿಳಿದೆನೊ ಪಾಲಿಸಯ್ಯ ||೩||

---

## ಸತ್ಯ, ಮಿಥ್ಯ.

(ನೀನೆ ದಯಾಳು ನಿರ್ಮಲಚಿತ್ತ ಎಂಬಂತೆ)

**ಆನಂದ ಭೈರವಿ—ಅಟತಾಳ**

೨೬. ಯಾರಿದ್ದರೇನಯ್ಯ ನೀ ಸರ್ವಮಯನಯ್ಯ ।
ಬೇರೊಬ್ಬರ ಗೊಡವೆ ಯನಗೇತಕಯ್ಯ ॥

ಧಾರಿತೋರುವರಿಲ್ಲ ಭೂರಿಬಂಧನವೆಲ್ಲ ।
ಮಾರಾರಿನಿನ್ನಪದ ಕೋರಿಬಂದೆನೊ ದೇವಾ ॥ಪ॥

ಸತಿ ಸುತ ಹಿತರು ಬಂಧುಗಳಾರು ಯನ್ನಯ ।
ಜ್ವತೆಯೊಳೊಬ್ಬರು ಬಾರರು ।
ಗತಿಸಿದ ಕುಣಪಕ್ಕೆ ಚಿತಿಯನೊಡ್ಡಲು ಹಿಂದೆ ।
ಅತಿ ದುಃಖಗೊಳ್ಳುತೆ ಬರುವರು ಮಸಣಕ್ಕೆ ॥೧॥

ಧನ ಧಾನ್ಯ ಸಂಪದ ಮನೆ ಮಠಗಳು ಯನ್ನ ।
ನನುಸರಿಸವು ಅಂತ್ಯದೋಳ್ ।
ಅನುದಿನ ಗಳಿಸಿದ ಸುಕೃತ ದುಷ್ಕೃತಗಳು ।
ಅನುಸರಿಸುವವೆನ್ನ ಮನುಮಥ ವೈರಿಯೆ ॥೨॥

ದಾಸರ ಸೆರವಿಯನಾಸಿಸುವೆನೊ ದೇವ ।
ಕಾಸುವೀಸದನೊಲ್ಲೆನೋ ।
ಈಶ **ಭೀಮ**ರಾಜ ವರದ ನೀನೆನ್ನನು ।
ಪೋಷಿಪ ಕರ್ತನೆಂದರಿತೆನೊ ದೇವಾ ॥೩॥

## ಇಂದ್ರಿಯಗಳ ಕರ್ತವ್ಯ.

(ಭೂಷಣಕೆ ಭೂಷಣ ಎಂಬಂತೆ)

**ಕಾಂಬೋದಿ—ಝಂಪ**

೨೭. ಶಿವನ ನೋಡುವ ಕಂಗಳೇ ಕಂಗಳು |
ಶಿವ ನಾಮವನು ನುಡಿವ ರಸನೆಯೇ ರಸನೆ ||ಪ||

ಶಿವ ಕಥೆಯಕೇಳುತಿಹ ಕಿವಿಗಳೇ ಕಿವಿಗಳಾ |
ಶಿವ ಪೂಜೆ ಮಾಳ್ಪ ಕೈಗಳೆ ಕೈಗಳು |
ಶಿವನ ಮೇಲಿರಿಸಿದ ಮಾನಸವೆ ಮಾನಸವು |
ಶಿವನಂಘ್ರಿಗೆರಗುವ ಶಿರವೆ ಶಿರವು ||೧||

ಶಿವನೆಡೆಗೆ ಪೋಗುವ ಕಾಲ್ಗಳೇ ಕಾಲ್ಗಳಾ |
ಶಿವನ ಮಂತ್ರವೆ ಸರ್ವಸ್ವಾತಂತ್ರವು |
ಶಿವನ ಭಕ್ತರ ಸಂಗ ದುರಿತ ವ್ಯಾಳವಿಹಂಗ |
ಶಿವನ ಸನ್ನಿಧಿಯುನೆರೆ ಧನದ ನವನಿಧಿಯು ||೨||

ಶಿವಪಾದ ಪಂಕೇಜ ನವ ಪರಿಮಳಾಸ್ವಾದ |
ನವಮಾಳ್ಪ ನಾಸಿಕವೆ ನಾಸಿಕವು ತಾಂ |
ಭವಹರವು **ಭೀಮ**ರಾಜಾರ್ಚಿತ ಸುನಾಮವದು |
ಶಿವಭಕ್ತರಾಚರಿಪುದಿದನು ಸಂಮುದದಿ ||೩||

## ನಾಮ ಮಹತ್ವ.

(ನಿಧಿ ಚಾಲಾಸುಖಮ ಎಂಬಂತೆ)

**ಕಲ್ಯಾಣಿ—ಆದಿತಾಳ**

೨೮. ಶಿವನಾಮಾಮೃತವೇ |
ಸೇವಿಸಲು ಪಾವನವಲ್ಲವೇ |
ತವಕದಿ ಪೇಳೆಲೈ ಮನವೇ ||ಪ||

ಶಿದ್ಧರು ನಾವೆಂದಶುದ್ಧ ಭಂಗಿಯ ಸೇದಿ |
ಬುದ್ಧಿಯನೀಗುತಬದ್ಧವಾಡುವುದೊಳಿತೇ ||೧||

ಸೇಂದಿ ಸರಾಯಿವಾ ಬ್ರಾಂದಿಸೇವನೆಯದು |
ಮಾಂದ್ಯವೀಯುವದೆಂದು ತಾಂಬಿಡದೆ |
ಕಂದರ್ಪರಿಪು **ಭೀಮ**ರಾಜ ವರದನ ಸಾ |
ನಂದದಿ ಪೊಗಳುವುದೊಂದೇ ಮಹಾ ರುಚಿ ||೨||

## ಅಮಾನುಷ ಕೃತ್ಯೆ.

(ಚಂದ್ರನು ಮೂಡುವನಿದೋ ಎಂಬಂತೆ)

ಜಂಝೂಟಿ—ಅಟತಾಳ

೨೯. ದೇವನೆ ಪೊರೆ ಸತತಂ | ಭಾವಜವೈರಿ ||ಪ||

ಪಾವನೆ ಗಿರಿಜೆಯ ಜೀವೇಶನೆ ಕೋವಿದನೆ |
ಈವುದು ಸನ್ಮಂಗಳವ ಭೂವಲಯಕ್ಕಾದರದಿ ||ಅ||

ಮೋಸದಿ ಜೀವಿಗಳ ಘಾಶಿಸುವ ಜನಗಳು |
ಆಸೇತು ಹಿಮಾಲಯ ಪರ್ಯಂತರ ದೊಳ್ವಾಸಿಪರು ||೧||

ಸುಳ್ಳನು ನಿಜವೆಂಬ ಕಳ್ಳರು ಹೆಚ್ಚಿರುವರು |
ಎಳ್ಳನಿತು ಧರ್ಮಪರ ರೆಲ್ಲೆಲ್ಲಿಯೂ ದುರ್ಲಭವು ||೨||

ದೂಷಕರಿಳೆಯನು ಶೋಷಿಸುತಲಿರುವರು |
ಈಶ **ಭೀಮ**ರಾಜ ವರದಾಸಾರ್ಚಿತ ಪಾದಯುಗ ||೩||

# ಮನಸ್ಸನ್ನು ಸಂಬೋಧಿಸಿ ಹೇಳುವುದು.

(ವನಜಾಸನ ವಿನುತ ಎಂಬಂತೆ)

ಶ್ರೀರಾಗ—ಆದಿತಾಳ

೩೦. ಮನವೇ! ಪರಶಿವ ನೊಲುಮೆಯ ಸಾಧಿಸು ಜವದಿ ||ಪ||

ತನುವಿದು ಸ್ಥಿರವೆಂದುನಂಬಿ ದಿನಗಳೆಯಲು ಬೇಡಯಮನ |
ಅನುಚರರೆಳೆದೊಯ್ಯುವಾಗ ತನುಜಸತಿಯರ್ಬಿಡಿಪರೇನೈ ||ಅ||

ಪರಧನ ಪರ ಸತಿಗಳು ಪಲು |
ನರಕ ತಪ್ಪದಲ್ತೆ ಸಿರಿಯು |
ಪರಿಹರವಹುದಾದಿ ಗುರುವ |
ಸ್ಮರಿಸಲುದುರಿತಾಂಧವು ನೆರೆ ಹರಿ ದುರುತರಸುಗತಿಯಹುದು ||೧||

ಚಲಿಸ ಬೇಡ ವಲೆಗಳಂತೆ |
ನಿಲುಕಡೆಯೊಳು ನಿಲ್ಲು ನಿಲ್ಲು |
ತಿಳಿನಿಶ್ಚಲ ತತ್ವವನ್ನು |
ಬಳಿಕ ಶಿವನ ಬಳಿಯೊಳು ನಲಿನಲಿದಾಡುವೆ ಸುಲಭವಿದುವೆ ||೨||

ನಿನ್ನಿಂದ ಸುಗತಿ ದುರ್ಗತಿ |
ಮುನ್ನಂ ಬರ್ಪುದು ನಿಕ್ಕಂ |
ಇನ್ನು ಭೀಮರಾಜ ವರದ |
ಪನ್ನಗ ಭೂಷಣನೊಳುದಯೆ ಯನ್ನುರೆ ಯಾಚಿಸು ಬಿಡದಿರು||

# ವಿದ್ಯಾಧಿಕರೆಂದು ವಿಜೃಂಭಿಸುವವರಿಗೆ ಎಚ್ಚರಿಕೆ.

(ರಾಮನಾಮ ಭಜಿಪ ನರಗೆ ಎಂಬಂತೆ)

ಕಾನಡ—ಆದಿತಾಳ

೩೧. ಏತಕೆ ಮರೆಯುವಿರಿ ಶೀತ ನಗ ಜಾತೆಯ ನಾಥನ |
ಘಾತಿಸುವರು ದಂಡಧರನ ದೂತರಂತ್ಯಕಾಲದಿ ||ಪ||

ಎಫ್. ಎ., ಬಿ. ಎ., ಎಂ. ಎ., ಪಾಸು |
ತಪ್ಪದೆ ಮಾಡಿರುವೆ ನೆನಲು |
ಬೆಪ್ಪೆ ಬಾ ನಿಮ್ಮಪ್ಪ ನೆಡೆಗೆ |
ತಪ್ಪದೊಪ್ಪಿಸುವೆ ವೆಂಬರು ||ಅ||

ಸಿವಿಲ್ ಸರ್ವಿಸ್ ಮಾಡ್ದೆ ನೆನಲು |
ಶಿವನ ಸರ್ವೀಸಿಲ್ಲ ವೆಂಬರು |
ನವಕೋಟಿ ಧನಾಧಿಪ ನೆನೆ |
ಭವಕೋಟಿ ಯೊಡೆಯನೆಂಬರು ||೧||

ಲಾಯರು ನಾಂ ಜಡ್ಜಿಯನಲು |
ಬಾಯ ಬಡಿದು ಶೆಳೆದೊಯ್ವರು |
ರಾಯನೆಂದು ಪೇಳೆ ಬಿಡರು |
ಹಾಯೆಂಬಂತೊದೆವರು ||೨||

ದೊರೆಯು ನಾನು ಬಾರೆನೆನಲು |
ದರದರ ನೆಳೆದೊಯ್ವರವರು |
ನಿರುತ **ಭೀಮ**ರಾಜ ನುತನ |
ಸ್ಮರಿಪ ನರರ ಪಿಡಿದೊಯ್ಯರು ||೩||

# ಮುಕ್ತಿ ಮಾರ್ಗ.

(ಪೋಗದಿರೆಲೊ ರಂಗ ಎಂಬಂತೆ)

ಶಂಕರಾಭರಣ—ಆದಿತಾಳ

೩೨. ಆಗ ದಾಗದು ಮುಕ್ತಿ | ಭೋಗಿಗಳಿಗೆ | ರಾಗಿಗಳಿಗೆ ||ಪ||

ಭವರೋಗ ವೈದ್ಯನ ಪಾದ | ತ್ಯಾಗಿಗಳಿಗೆ ಮುಕ್ತಿ ||ಅ||

ನಿರುತ ಸಟೆಯನಾಡುತ್ತರಿಯದ ಜನರನ್ನು |
ಮರುಳುಮಾಡಿ ಧನ ಹರಿಸುತ್ತಲಿ |
ಕರುಣ ಲೇಶವಿಲ್ಲ ದುರತರ ದುಷ್ಕರ್ಮ |
ವರಿತು ಮಾಡುವವರು ವ್ರತಗಳ ಮಾಡ್ದರುಂ ||೧||

ಪಾನ ದ್ಯೂತಗಳಾದಿ ಹೀನ ವೃತ್ತಿಗಳನು |
ಮಾನ ವಿಲ್ಲದೆ ವ್ಯಭಿಚಾರವನು |
ಸ್ವಾನನಂದದಿಮಾಳ್ಪ ಮಾನವ ಪಶುಗಳ್ಮ |
ಹಾನು ಭಾವರಂತೆ ಕ್ರತುಗಳ ನೆಸಗಲು ||೨||

ಸನ್ಯಾಸಿ ನಾನೆಂದು ಪನ್ಯಾಸಗಳ ಮಾಡಿ |
ಅನ್ಯರ ಸೊತ್ತುಗಳ ಪಹರಿಪ |
ಅನ್ಯಾಯಕಾರಿತಾಂ ಮಾನ್ಯ ಸದ್ಗುರುವೆನೆ |
ಇನ್ಯಾಕೆ ಮೆಚ್ಚುವ **ಭೀಮ**ರಾಜಾರ್ಚಿತ ||೩||

## ಭಗವಂತನು ಸರ್ವಸಾಕ್ಷಿಯಾಗಿರುವಿಕೆ.

(ಇಂದು ಯನಗೆ ಗೋವಿಂದ ಎಂಬಂತೆ)

ಭೈರವಿ—ಛಾಪು-ಅಟತಾಳ

೨೩. ಲೋಕಕ್ಕೆ ನೀನಕ್ಷಿ ಲೋಕಕ್ಕೆ ನೀ ಸಾಕ್ಷಿ ।
ಲೋಕವನ್ನೊಳಗೊಂಡಿಹುದು ನಿನ್ನ ಕುಕ್ಷಿ ।
ಲೋಕದ ಜನರೆಸಗುವ ದುಷ್ಕಾರ್ಯಗಳನ್ನು ।
ನೀ ಕಾಣದಂದದೊಳೇಕೆ ಮೌನದೊಳಿಹೆ ॥ಪ॥

ಸುಳ್ಳು ಹೇಳುವನು ತಾನಲ್ಲೇ ಬೆಂದುರಿವಂತೆ ।
ಕಳ್ಳತನವ ಮಾಡುವನು ಸಾಯ್ವಂತೆ ।
ಮೆಲ್ಲನೆ ವ್ಯಭಿಚಾರಗೈವ ಸ್ತ್ರೀ ಪುರುಷರ ।
ಸೊಲ್ಲಡಗುವ ರೀತಿ ಮಾಡೋ ದೇವ ॥೧॥

ಮೋಸದಿ ನರರನ್ನು ಕೊಲ್ಲುವ ಮನುಜರು ।
ನಾಶವಾಗುವಂತೆ ವಿಧಿಸೋ ದೇವಾ ।
ಲೇಶವು ಭಯವಿಲ್ಲ ಮೋಸಕ್ಕೆ ಮಿತಿಯಿಲ್ಲ ।
ಕಾಸಿನಾಸೆಗೆ ದೋಷಕಾರ್ಯವ ಮಾಳ್ಪರು ॥೨॥

ಮರಣಾನಂತರದೊಳು ನರಕಯಾತನೆಯೆಂಬು ।
ದರಿತವರಾರೆಂದು ದುರುಳ ನರರ್ ।
ಹರ ನಿನ್ನ ಸ್ಮರಣೆಯ ತೊರೆದು ಕೆಡುವರಯ್ಯ ।
ಪರಮ ಪಾವನ **ಭೀಮ**ರಾಜ ವರದನೇ ॥೩॥

---

## ಜೀವ ಹತ್ಯ.

(ಕಂಗಳಿದ್ದೇತಕೋ ಎಂಬಂತೆ)

ತೋಡಿ—ಆದಿತಾಳ

೩೪. ಮಾಡಬಾರದ ಕಾರ್ಯ ಮಾಡುತಿರುವರು ||

ನೋಡು ಶಂಭು ಶಂಕರ ದಯ |
ಮಾಡೊ ಮತಿಯ ಶುಭಕರ |
ರೂಢಿಯೊಳವಿವೇಕಿ ಜನರು |
ನಾಡೆ ಮೂಢ ಭಕ್ತಿಯಿಂದ ||

ನಿನ್ನ ಸತಿ ದುರ್ಗಿ ಮಾರಿ |
ಯನ್ನು ಪೂಜೆ ಮಾಳ್ಪೆವೆಂದು |
ಮುನ್ನರಿಯದ ಪ್ರಾಣಿಗಳನು |
ಬಲಿಗೊಡುತತಿ ಹರುಷದಿಂದ ||

ಕೋಣ ಕುರಿಗಳನ್ನು ನಿನ್ನ |
ಪ್ರಾಣಕಾಂತೆ ಕೇಳ್ವಳೆಂದು |
ಗೋಣ ಹರಿದು ಪ್ರಾಣ ಕಳೆದು |
ಕ್ಷೋಣಿಯನ್ನು ತೋಯಿಸುವರು ||

ದೂರು ಹೊರುವೆ ಮಾರ ವೈರಿ |
ಪಾರು ಮಾಡೊ ಜೀವಹತ್ಯ |
ಧಾರುಣಿ ಸ್ತ್ರೀ ಮರುಗುತಿಹಳ |
ಪಾರ ಮಹಿಮ **ಭೀಮ** ಪ್ರೇಮ ||

# ಪಶು ವಧೆ.

(ಸುಖಿಯುವರೋ ರಾಮನಾಮ ಎಂಬಂತೆ)

## ರಾಗ-ಕಾನಡ—ಆದಿತಾಳ

೩೫. ಪರಶಿವನೇ ! ಪೊರೆವುದು ಪಶುಗಳ ||ಪ||

ಭರತ ಪುಣ್ಯ ಭೂಮಿಯೊಳ್ನೆರೆ ಗೋವಧೆ |
ನಿರುತ ಮಾಳ್ಪ ನೀಚರ ಶಿರವರಿ ಜವ ||ಅ||

ನಿನ್ನಯ ವಾಹನವನ್ನು ಪೆತ್ತಿಹ ಗೋ |
ವನ್ನು ವಧಿಸುವವರನ್ನು ನೋಡುತಲಿ |
ಮನ್ನಿಸುವುದು ನಿನಗಿನ್ನುಚಿತವೆ ಪೇಳ್ |
ಪನ್ನಗಧರ ನೀನಿನ್ನು ತಪ್ಪಿಸು ಕೊಲೆ ||೧||

ಪಶುಪತಿಯಾಗಿ ನೀಂ ಪಶು ಘಾತಕಿಗಳ |
ಪೆಸರಡಗಿಸಲಸಮರ್ಥನೆ ಪೇಳ್ |
ಶಶಿಧರ ನಿನ್ನ ಪೆಸರನ್ವರ್ಥವಾಗಲು |
ಪಶುಮಂಡಲಿಯನು ಪಾಲಿಪುದೈ ||೨||

ದುಷ್ಟರಿಗಾಯುವಿನ್ನಷ್ಟು ಹೆಚ್ಚಿಸಿ ಬಹು |
ಕಷ್ಟವ ಕೊಡಿಸುವೆ ಶಿಷ್ಟರಿಗೆ |
ದ್ರಿಷ್ಟಿತ್ರಯನೆ ನಿನಗಿಷ್ಟವೇನಿದು ಸರ್ವೋ |
ತ್ಕೃಷ್ಟ ಭೀಮರಾಜ ವರದ ಮಹೇಶ ||೪||

## ಅನುಮಾನ.

(ಭಾಸಮುಲಾಜಾಹಲ ಎಂಬಂತೆ)

ರಾಗ—ಆದಿತಾಳ

೩೬. ಯಾರನು ಸೇರುವುದೊ ಮ|
ತ್ತಾರಮಾತ ಕೇಳ್ವುದೋ |
ಯಾರು ಹಿತಾಹಿತರೊ ಮ|
ತ್ತಾರು ಗುರುಗಳ್ದೈವವೋ ||ಪ||

ಮುಂದೆ ನಿನ್ನ ಹಿತರೆಂಬರು |
ಹಿಂದೆ ನನಗಹಿತ ಮಾಳ್ಪರು |
ಬಂಧನ ಬಿಡಿಸುವೆವೆಂದುರೆ |
ಬಂಧನದೊಳು ಶಿಲುಕಿಸುವರು ||೧||

ಉಪದೇಶವ ಮಾಳ್ಪೆವೆಂದು |
ಕಪಟ ಗುರುಗಳ್ಕಾಣಿಕೆಯನು |
ಗುಪಿತದೊಳಪಹರಿಸುತೆ |
ಚಪಲರಗೈವರು ಕೃಪೆ ಮಾಡ್ವೆ ||೨||

ಜನ್ಮಗಳುಂಟೆಂಬರು ಪುನ |
ರ್ಜನ್ಮಗಳಿಲ್ಲೆಂಬರು ನೆರೆ |
ತನ್ಮಯು ಶಿವನೆಂಬರು ಗುರು |
ಚಿನ್ಮಯು ಭೀಮನರದನೇ ||೩||

# ಬಿಕ್ಷುಕರು.

(ಪೊರೆ ಶೈಲಾಧಿಪ ಸಂಭವೆ ಎಂಬಂತೆ)

ಹಮ್ಮೀರ ಕಲ್ಯಾಣಿ—ಆದಿತಾಳ

೩೬. ಹರ ಯೇನೆಂದು ಪೇಳುವೆನ್ನೈ ।
ಪರಿಯರಿತಿಹೆ ಯೆಲ್ಲವ ನಿರುತದಿ ನೀಂ ॥ಪ॥

ನೀನೊಂದು ಕಾಲದಿ ಬಿಕ್ಷವ ಬೇಡುತ ।
ಲಾನಂದಿಸೆ ತಾನೊಂದಾದುದು ॥ಅ॥

ಶಿವನು ತಾಂ ಬಿಕ್ಷವ ಬೇಡುವೆ ನೆನುತಲಿ ।
ತನೆ ಬಿಕ್ಷುಕರು ಹೆಚ್ಚಿರುವರು ದೇವ ॥೧॥

ನಿನ್ನ ಹೆಸರಿನ ಜಂಗಮ ಜೋಗಿಗಳ್ಹರೆ ।
ಯನ್ನು ದರಿದ್ರದಿ ಮುಳುಗಿಸುವರು ॥೨॥

ಯಾಚನಾ ವೃತ್ತಿಯು ನೀಚವೆಂದರಿತರು ।
ಯೋಚಿಸರ್ನೈ ಭೀಮರಾಜ ವರದ ॥೩॥

## ಕಳವಳ.

(ಎಂದು ದಾಚುಕೊನ್ನಾವು ಎಂಬಂತೆ)

### ರಾಗ-ಅಠಾಣ—ಆದಿತಾಳ

೩೮. ಎಂದು ನಿನ್ನ ಕಾಂಬೆನೈಯ್ಯ |
ನಂದಿಸ್ಯಂದನನೆ ದೇವ ||ಪ||

ಮಂದಮತಿಯು ನಾನು ಭವ|ಬಂಧನದೊಳು ಶಿಲುಕಿ ಬಲು|
ನೊಂದೆನಯ್ಯ ಸುಂದರಾಸ್ಯ | ಇಂದುತೋರನಾಥಬಂಧು |
ಕಂದನೆಂದು ಭಾವಿಸಿ ಆ | ನಂದದಿಂದ ಪಾಲಿಪುದೈ ||ಅ||

ಬಾಲತ್ವದಿ ಬಾಲಕ್ರೀಡೆ, ಯೌವ್ವನದೊಳು ಮದನಕ್ರೀಡೆ |
ಆಲೋಚನೆ ಮುಪ್ಪಿನಲ್ಲಿ, ನೀಲಕಂಠ ನಿನ್ನ ಭಜಿಪ |
ವೇಳೆಯರಿಯೆನಯ್ಯ ದೇವ, ಪಾಲಿಸೆಂದು ಬೇಡುವೆನು |
ಕಾಲ ಕಾಲ ಶೂಲಿಯೆ ವಿಶಾಲ ಹೃದಯ ಸದಯ ||

ಶೈಲ, ಬಾಲೆ, ಲೋಲಾಮರ, ಜಾಲವಿ
ನುತ, ಸೀಲ ಪ್ರಥಮ, ಮೇಳ ಸಹಿತ
ದೇವ ದೇವ ಕಾಮಿತಾರ್ಥ ದಾತ ಕವಿ,
ಲಲಾಮ ಭೀಮರಾಜ ವರದ ||೧||

## ಆಪದ್ಬಾಂಧವ.

(ಗತಿಯಾರು ಯನಗಿನ್ನು ಎಂಬಂತೆ)

ರಾಗ-ಕಾಂಬೋದಿ—ಆದಿತಾಳ

೩೯. ನೀನೇ ತಂದೆಯು ಬಂಧು ಬಳಗ |
ನೀನೇ ಹಿತ ನೀನೇ ಗತಿ ಮತಿ ದಾತ ||ಪ||

ನೀನಲ್ಲದಿತರರು, ಹಾನಿಯ ಕೋರ್ವರು |
ದೀನನಾದೊಡೆ ಅವಹೇಳನ ಮಾಳ್ಪರು ||ಅ||

ಧನ ಧಾನ್ಯ ಸಂಪದವನುವಿನಿಂದಿರುವಾಗ |
ಘನನೆಂದು ಪೊಗಳುವರು |
ಯನಗಧಿಕಾರವಿರ್ದೊಡೆ ದೇವರೆಂಬರು |
ಹಣವಧಿಕಾರವಿಲ್ಲದೊಡೆ ಹೆಣವೆಂಬರು ||೧||

ತಂದುಹಾಕುವ ಸಮಯದಿ ಬಂಧು ಬಳಗವು |
ತಿಂದುಹಾಕಲು ಸೇರ್ವರು |
ನೊಂದು ದುಃಖದಿ ಮರುಗುವ ಸಮಯದೊಳಾರು |
ಬಂದು ನೋಡರು ಚಂದ್ರಧರನೆ ನೀನಲ್ಲದೆ ||೨||

ಕುಲ ವಯೋರೂಪ ಬೆಂಬಲ ಧನವಧಿಕಾರ |
ಬಲವನೊಂದೆಣಿಸೆ ನೀನು |
ಸುಲಲಿತ ಗುಣ ಗಣಕ್ಕೊಲಿಯುವ ದೇವ ನೀಂ |
ಸಲಹಯ್ಯ **ಭೀಮ**ವರದ ಮೋದದಿಂದಲಿ ||೩||

---

## ಸರ್ವ ಸ್ವತಂತ್ರ.

(ಸಾರಸ ಸಮಮುಖ ಎಂಬಂತೆ)

ರಾಗ-ಕರ್ನಾಟ್—ಆದಿತಾಳ

೪೦ ನೀನೆ ಸ್ವತಂತ್ರ ಜಗದೋ | ಅನ್ಯರತಂತ್ರರು ||ಪ||

ಮಾನವ, ಪಶು, ಖಗ, ಕ್ರಿಮಿ, ಕೀಟಂಗಳು |
ಧ್ಯಾನಿಸಲಸ್ವಾತಂತ್ರ ದೊಳಿಲ್ಲವೆ ||ಅ||

ಗಾಳಿ, ಮಳೆ, ಬೆಳಕು, ವೇಳೆಯರಿತುನೀಂ | ದೇವಾ |
ಪಾಲಿಸ ದಿರ್ದೊಡೆ ತರಹರಿಪವು ಸರ್ವ ಜೀವ |
ಫಾಲನೇತ್ರ ನಿನ್ನ ಸೂತ್ರದೊಳಡಗಿದೆ |
ಮೇಲಾಗಿಯೆ ಸ್ಥಾವರ ಜಂಗಮ ಸ್ತೋಮ ||೧||

ಅರಿತರಿತಿದನು ಮುಂಬರಿತ ಜನಂಗಳು | ತಾವು |
ಪರಿಪರಿಯೊಳು ಕರೆಕರೆ ಪಡುತಿರುವರದೇಕೋ |
ನೆರೆ ಸರ್ವಸ್ವತಂತ್ರರು ತಾವಾಗಲು |
ಉರಿವ ದೀಪಕೆರಗುವ ಪತಂಗ ದೋಲ್ ||೨||

ಯಾರು ಸ್ವತಂತ್ರರದಾರ್ಪರತಂತ್ರರು | ನೋಡೆ |
ಮಾರವೈರಿನಿನ್ನ ಚಾರುಪದವ ಸೇರುವರೆಲ್ಲರುಸ್ವತಂತ್ರರ್ |
ಪಾರಮಾರ್ಥ ಮಾರ್ಗವ ಕರುಣಿಸುಹರ |
ಸೂರಿ **ಭೀಮ**ರಾಜಾರ್ಚಿತ ಪುರಹರ ||೩||

## ವಿಗ್ರಹಾರಾಧನ.

(ತ್ರಿಪುರ ಸುಂದರೀ ಎಂಬಂತೆ)

ಖರಹರಪ್ರಿಯ—ರೂಪಕತಾಳ

೪೧. ಗುಡಿಯ ಕಟ್ಟಿ ಸಾಹಸದಿ |
ನಡುವೆ ಕೂಡಿ ಬಿಟ್ಟರ್ನಿನ್ನ ||ಪ||

ಜಡ ಪದಾರ್ಥವಾದ ಶಿಲೆಯೊಳ್ |
ಬಿಡದೆ ಲಿಂಗವನ್ನು ಮಾಡಿ |
ಕಡೆಗೆ ಪೋಗದಂತೆ ನೀನು |
ತೊಡರಿಸಿಹರು ಬಾಗಿಲ ಬೀಗವ ||ಅ||

ಉರಿವ ನಂದಾ ದೀವಿಗೆಗಳ |
ನಿರಿಸಿಹರು ಪಾರ್ಶ್ವಂಗಳಲ್ಲಿ |
ನಿರುತ ಬೆಳಕಿನೊಳಿರಲೆಂದು |
ದುರಿತ ತನೋ ತರಣಿ ನೋಡೈ ||೧||

ದೇಹವೆಂಬ ಗುಡಿಯು ನಿನಗೆ |
ಗೇಹವಾಗಿ ಮಾಳ್ಪ ನರಗೆ |
ಊಹಿಸಲಸದಳವೆನಿಸುವ |
ಸ್ನೇಹ ಮದಗುತಿಹುದು ಕೊನೆಗೆ ||೨||

ಸರ್ವ ಮಯನು ನೀನಾಗಿಹೆ |
ಉರ್ವಿಯೊಳ್ನಿನ್ನ ಪಿಡಿಯಲಾಗದು |
ಶರ್ವ **ಭೀಮ**ರಾಜ ವರದ |
ಪಾರ್ವತೀಶ ಪಾಲಿಸು ದೇವನೆ ||೩||

# ಸರ್ವ ಸಮತ್ವ.

(ಪ್ರಭುವೋರ್ವನೆ ಜಗದಲಿ ಎಂಬಂತೆ)

ಬೇಹಾಗ್—ಆದಿತಾಳ

೪೨. ಶಿವ ನೀನೆ ಸರ್ವಾಧಿಕನೆನುತ |
ಭುವದೆ ಶೈವರು ತಿಳಿದಿಹರಿತ್ತ |
ಹರಿಯುತ್ತಮನೆಂಬರು ವೈಷ್ಣವರತ್ತ ||ಪ||

ಈತೆರದೊಳು ನಮ್ಮ ಜಾತಿಯಧಿಕವೆಂದು |
ಮಾತುಮಾತಿಗೆ ಕಲಹವನೆಸಗುವರು |
ಕಾತುರ ಗೊಳುತಲಿ ಜಾತಿ ಜಾತಿಗಳೊಳು ||೧||

ಹೆಚ್ಚು ಕಡಿಮೆಯದು ಮತ್ಸರ ಗುಣವೇ |
ಕುಚ್ಛಿತರಾಡುವ ಮಾತಿನ ಭರವೇ |
ಅಚ್ಯುತನಿಗು ನಿನಗಮಿತ ಭೇಧವೇಂ ||೨||

ಜಾತಿಗಳೊಳು ನೀತಿಯರಿತ ಜಾತಿಯೆ ಮೇಲು |
ಪಾತಕ ಕಾರ್ಯವ ಮಾಳ್ಪುದೆ ಕೀಳು |
ಪ್ರೀತಿಸು **ಭೀಮ**ವರದ ನಿರುತದೊಳು ||೩||

---

# ಕಾಮ.

(ಸ್ವಾಮಿ ಶ್ರೀನಿವಾಸ ಎಂಬಂತೆ)

ಭೈರವಿ—ಆದಿತಾಳ

೪೩. ಕಾಮಿಯಾಗುತನ್ಯ ಕಾಮಿನಿಯರ |
ಕಾಮಿಸಲು ಕಾಮನಾಶ ನಾಶ ಗೈವ ||ಪ||

ಹೊನ್ನು, ಹೆಣ್ಣು, ಮಣ್ಣು |
ನನ್ನದೆಂದ ನರರು |
ಮಣ್ಣು ಪಾಲಾದರು |
ಮುನ್ನ ದೆನಿತೊ ಜನರು ||೧||

ಧರೆಯ ಸುಖವ ನಂಬಿ |
ಪರವ ಮರೆಯ ಬೇಡಿ
ಧರೆಯ ಸುಖವು ಸ್ವಪ್ನ |
ದಿರವು ಪರಿಕಿಸಿದೊಡೆ ||೨||

ಕಾಮಿಯಾಗ ಬೇಕು |
ಸ್ವಾಮಿ ಪಾದದಲ್ಲಿ |
ಭೀಮರಾಜ ವರದ
ಸೋಮ ಮೌಳಿಯಲ್ಲಿ ||೩||

## ಮಾನವ ಜನ್ಮದ ಶ್ರೇಷ್ಠತ್ವ.

(ನಂದಿನಿ ನೋಡು ಕಳಿಂಗಪತಿ ಎಂಬಂತೆ)

ಬೇಹಾಗ್—ಆದಿತಾಳ

೪೪. ಮನುಜ ಜನ್ಮ ಶ್ರೇಷ್ಠವದೆಂತು |
ಮನದಿ ಶಿವನ ಧ್ಯಾನಿಸದೆ ಸಮಂತು ||ಪ||

ತಾಯಿ ತಂದೆಗಳ ನೋಯಿಸಿ ಗುರುವಿಗ |
ನ್ಯಾಯುವ ಮಾಡುತ ಹಿರಿಯರನು |
ಬಾಯಿ ಕೊಬ್ಬಿ ಬೈಯ್ಯುತಲಿರುವ ||ಪ||

ನ್ಯಾಯ ವಿರೋಧವ ನ್ಯಾಯ ಸ್ವಭಾವ ವಿ |
ಧೇಯತೆ ಶೂನ್ಯವದಾಗಿರುವ |
ಹೇಯದ ನರ ನಾಯಿ ನರಿಗು ಕಡೆ ||೧||

ಕಸವ ತಿಂದು ಪಶುಗಳು ಪಾಲೀವವು |
ಬಿಸಿಲಾನುತೆ ನೆರಳೀವವು ತರುಗಳು |
ಅಸುರನಪಕಾರ ವೆಸಗುವತಾಂ ||೨||

ಗುಣ, ಕರ್ಮ, ಸ್ವಾಭಾವದೆ ಶ್ರೇಷ್ಠತ್ವವ |
ನೆಣಿಸರು ಕುಲದಿಂದದು ಬರದು |
ಘನತೆ ಭೀಮ ವರದನ ಪದವೇ ||೩||



# ಕೃತಾಪರಾಧ.

(ತಡಿ ಭೀಮನೆ ದುಡುಕದಿ ಎಂಬಂತೆ)

ತೋಡಿ—ಆದಿತಾಳ.

೪೫. ಕೊಡು ಸನ್ಮತಿ, ಮೃಡ ನಿ |
ನ್ನಡಿಗಳ ಪಿಡಿವಂದದಿ ||ಪ||

ಕೆಡುಗರ ಸಂಗವ ಬಿಡಿಸಿ |
ಜಡಮತಿಯಂ ಪರಿಹರಿಸಿ ||ಅ||

ಹೆಂಡಿರು ಮಕ್ಕಳ ಕೂಡಿ |
ಭಂಡತನದಿ ನಾ ನಾಡಿ ||
ಕಂಡ ಕಂಡ ದುಷ್ಕಾರ್ಯಗಳ್ಮಾಡುತೆ |
ಪುಂಡತನವ ಬಲು ಮಾಡಿದೆ ಸೈ ||೧||

ಹೀನ ಕಾರ್ಯಗಳ ನಾಂ |
ಮಾನವಿಲ್ಲದೆಸಗಿ ||
ದೀನರ ಪರಿಗಣಿ ಸದೆ ದುಮ್ಮಾನದಿ |
ದಶಿನವ ವೃತ್ತಿಯೊಳ ಧಮನಾದೆ ||೨||

ಸೋಮ ಮೌಳಿ ನಿನ್ನ |
ನಾಮಸ್ಮರಣೆಯನ್ನ ||
ತಾಮಸವಿಲ್ಲದೆ ಮಾಳ್ಪಂದದಿ ನೀಂ |
ಭೀಮರಾಜ ವರದನೆ ಕರುಣಿಸಿ ||೩||

## ಬಾಲವಿತಂತುಗಳ ಗೋಳು.

(ರ ಘು ಕು ಲ ನಾ ಯ ಕ ಎಂ ಬಂ ತೆ)

ಖರಹರಪ್ರಿಯ—ರೂಪಕ.

೪೬. ಘೋರ ಪಾಪ ಕಾರ್‍ಯವನ್ನು |
ಮಾರ ರಿಪು ವಿದಾರಿಸೋ |
ದಾರಿಯನ್ನು ತೋರಿಸೋ |
ಪುರಾರಿ ನೀನು ಪಾಲಿಸೋ ||ಪ||

ಅಬಲೆಯರೊಳು ವೈಧವ್ಯವು |
ಪ್ರಬಲವಾಗಿ ಸತತವು |
ಶುಭ ವಿಭವಂಗಳೊಳು ಬೆರೆಯ |
ದುಭಯ ಭ್ರಷ್ಟರೆನಿಸುತಿಹರು ||೧||

ಭ್ರೂಣ ಹತ್ಯ ಶಿಶು ಹತ್ಯವ |
ಕಾಣದಂತೆ ಮಾಳ್ಪರು |
ಕ್ಷೋಣಿಯೊಳಿದ ಮಾಣುವ ವಿಧ |
ಸ್ಥಾಣುವೆ ನೀಂ ಮಾಳ್ಪುದೀಗ ||೨||

ಬಾಲ ವಿತಂತುಗಳು ಜಗದಿ |
ಗೋಳಿಡುತ್ತಲಿರುವರು |
ಕಾಲವರಿತು ಮೇಲನೆಸಗು |
ಕಾಲ ಕಾಲ ಭೀಮಪಾಲ ||೩||

# ಪರಬ್ರಹ್ಮ ಸಾಕ್ಷಾತ್ಕಾರ.

(ರಘುಪತಿಯ ಸೇವ ಎಂಬಂತೆ)

ಹಿಂದುಸ್ತಾನಿ—ತೋಡಿ—ಆದಿತಾಳ

ನೋಡಿದೆ ಶಂಕರನ |
ಮೂಡಿತು ಸಮಾಧಾನ |
ನೋಡಿದ ಕಿಂಕರನ |
ಪಾಡಿದೆ ಸಂಕೀರ್ತನ ||ಪ||

ಸದ್ಯೋಜಾತ, ವಾಮದೇವ, ಅಘೋರ, ಈಶಾನ, ತತ್ಪುರು |
ಷಾದ್ಯಮಲ ಪಂಚ ಮುಖ, ದಶ ಭುಜ |
ವಿದ್ಯುಲ್ಲತಾ ಕೋಟಿ ರಂಜಿತ ಪ್ರತಿಭಾಸಂ |
ಪದ್ಯುಕ್ತ ಮಹಿಮಾ ಮೂರ್ತಿಯಂ ನಾಂ ||೧||

ಪಂಚಾಕ್ಷರ ಪ್ರಣವ ಸಮಂಚಿತ |
ಪಂಚ ಶರಾರಿಯು ಪಾದವ ನುತಿಸುವರಘ |
ಸಂಚಯುಮಂ ಕಳೆಯುವ ದೇವ |
ದೇವನಂ **ಭೀಮ**ರಾಜ ವರದನಂ ನಾಂ ||೨||

---

## ಸಹೋದರರ ಕಲಹ.

(ಏಕೆ ಮಾತುಗಳಾಡದಿರುವಿ ಎಂಬಂತೆ)

ಕಾಂಬೋದಿ—ಆದಿತಾಳ.

೪೮. ಇಂದು ಶೇಖರ ಎಂದಿಗಾದರ |
ಬಂದಪುದೊ ಸಹೋದರರೊಳು ||ಪ||

ತಂದೆ ತಾಯ್ಗಳ ನಿಂದೆಯೊಳಾ |
ನಂದ ಪೊಂದುವ ಮಂದ ಭಾಗ್ಯರು ||ಅ||

ಮಾತೆಯ ಬಯ್ಯುತೆ ತಾತನ ಹೊಡೆಯುತೆ |
ಪ್ರೀತಿಸು ತಿರ್ಪರು ಹೆಂಡಿರನು |
ನೀತಿ ವಿಹೀನರು ಪಾತಕ ಕಾರ್ಯಕೆ |
ಕಾತುರ ಪಡುವರು ಮಾತನು ಕೇಳರು ||೧||

ಅಣ್ಣ ತಮ್ಮಂದಿರು ಕಲಹವ ಮಾಳ್ಪರು |
ನುಣ್ಣಗೆ ತೊಳೆವರು ಧನ ಧಾನ್ಯವ |
ನನ್ನದು ತನ್ನದು ಯೆನ್ನುತ ಹೊಲ ಮನೆ |
ಯನ್ನುರೆ ವ್ಯಾಜ್ಯದೊಳ್ ಧಾರೆಯ ನೆರೆವರು ||೨||

ಲಾಯರ ಸೇರಿ ವಿಲಾಯತಿ ವರಿವಿಗು |
ಕಾಯದೆ ಕೌನ್ಸಿಲ ನೋಡುವರು |
ಆಯತಿಯರಿಯದೆ ಸಾಲದ ಶೂಲದಿ |
ಬಾಯ್ಬಿಡುತಳುವರು **ಭೀಮ**ರಾಜಾರ್ಚಿತ ||೩||

## ನಾನತ್ವ.

(ಇದಿನೀಕು ಮರಿಯಾದಗಾ ಎಂಬಂತೆ)

ಬೇಗಡ—ಅಟತಾಳ

೪೯. ನನ್ನದೀನೆಲವೆಂಬರು, ಕುನ್ನಿ ನರರು |
ನನ್ನದೀ ಮನೆ ಯೆಂಬರು ||ಪ||

ನನ್ನದೀ ಹಣವೆಂದು, ನನ್ನ ಸತಿ ಸುತರೆಂದು |
ನನ್ನ ಪಶುಗಳೆಂದು, ನನ್ನಯಾಳುಗಳೆಂದು ||ಅ||

ನಾನು ನನ್ನದುಯೆಂದ, ಮಾನವ ಕೋಟಿಯು |
ಯೇನೊಂದು ಕಾಣದೆ, ಹಾನಿಯ ಪೊಂದಿದರ್ ||೧||

ನೀ ನಿನ್ನದೆಂದ ಮಹಾನು ಭಾವರು ನಿತ್ಯ |
ಸಾನಂದ ಯುತರಾಗಿ, ಮಾನಿತರಾದರು ||೨||

ಈ ಮಾಯೆಯನುನಂಬಿ, ತಾಮಸ ಪ್ರಕೃತಿಯೊಳ್ |
**ಭೀಮ**ರಾಜ ವರದ, ಸ್ವಾಮಿಯ ಮರೆಯುತೆ ||೩||

---

## ಹಣ.

(ಬೆದರುತೆ ತೆರಳುವುದದೇತಕೆ ಎಂಬಂತೆ)

### ನಾಟಕುರಂಜಿ—ಆದಿತಾಳ

೫೦. ಹಣವೆ ಘನವು ಜನಗಳಿಗನಿಶಂ |
ಗುಣವನೆಣಿಸರು ಜಗದೊಳಾರುಂ |
ಕನಸಿನೊಳುಂ, ಮನಹಿನೊಳುಂ ||ಪ||

ಝಣ ಝಣ ಝಣರೆನುತೆಣಿಪರು ಹಣಮಂ |
ನೆನೆ ನೆನೆದುಬ್ಬುತೆ ಹೊಳುವರದನಂ |
ಹೆಣದಂದದಿ ಕಾಯುವರನುದಿನಮುಂ |
ಫಣಿಭೂಷಣನನು ಮರೆಯುವ ಮರ್ಣ್ನಂ ||೧||

ಮಿತ್ರರ ನಗಲಿಸುವುದು ತಾಂ ದುಡ್ಡೇ |
ಶತೃತ್ವವ ಹುಟ್ಟಿಸುವುದು ದುಡ್ಡೇ |
ಮೃತ್ಯುವನ್ನು ಬರಮಾಳ್ಪುದು ದುಡ್ಡೇ |
ಕೃತ್ರಿಮ ಮಾಡಿಸುವುದು ತಾಂ ದುಡ್ಡೇ ||೨||

ರೊಕ್ಕವಿಹಕ್ಕೆ ಪರಕ್ಕಾತಂಕಂ |
ದುಃಖಭಾಜನವು ತಾನಾಗಿರ್ಕುಂ |
ಮುಕ್ಕಣ್ಣೇಶ್ವರ **ಭೀಮ** ವರದನಂ |
ಅಕ್ಕರದೊಳು ನೆನೆಯುವುದುರುಸೌಖ್ಯಂ ||೩||

## ದಯೆದೋರೆಂದು ಬೇಡುವಿಕೆ.

(ನಾರಿಮಣಿ ಸುಂದರ ನಾಗವೇಣಿ ಎಂಬಂತೆ)

ಮುಖಾರಿ—ಆದಿತಾಳ

೫೧. ಮಾರಾರಿ ನಿನ್ನನು ಸೇರ್ವ ದಾರಿ |
ತೋರಿಸೈ ಪರೋಪಕಾರಿ ||ಪ||

ಕೋರಿದೆ ನಾನು ನಿನ್ನ, ಸೇರಿಸು ನಿನ್ನೊಳೆನ್ನ ||
ಶರಣರನ್ನ ಪೊರೆವರನಾ, ನರಿಯೆ ನಿನ್ನ, ಕರುಣಮನ ||ಅ||

ಪೀಡಿಪುದೆನ್ನನು ಮಮಕಾರ, ಮಾಡುವುದೇನು ಹರ |
ಬೇಡವೊ ಸಂಸಾರ, ಮಾಡೆನ್ನೊಳ್ದಯ ಪೂರ ||
ಮೃಡಬುಧರ, ನುಡಿಯುಸ್ಥಿರ |
ಕೊಡಿಸು ತ್ವರ, ತೊಡೆ ಜಡರ  ||೧||

ಈ ಮಾಯಾ ಪ್ರಪಂಚದೊಳನ್ಯಾಯ
ಶ್ರೀಮಂತರೊಳತಿಶಯವೈ | ಸಾಮಾನ್ಯ ವಿದುರಾಯ
**ಭೀಮ**ರಾಜಾಖ್ಯ ಪ್ರಿಯ || ಗುರುವರ್ಯ,
ಪರಿಸರಿಯ, ನಡೆನುಡಿಯ, ನೋಡಯ್ಯ ||೨||

## ಪ್ಲೇಗು.

(ಶ್ರೀದುಗ್ಧಾಬ್ಧಿಶಯನನೆ ಎಂಬಂತೆ)

**ಕಲ್ಯಾಣಿ—ಆದಿತಾಳ**

೫೨. ಶ್ರೀ ಕಲ್ಯಾಣ ಗುಣ ಗಣ ಭೂಷಣನೆ ಶಿವ ||ಪ||

ಈ ಕಲಿಯ ಚಿತ್ರವನು ನೀನವ |
ಲೋಕಿಸುವುದೈ ಲೋಕನಾಯಕ ||ಅ||

ಕೊಲುವ ಹುಲಿಗಿಂತಧಿಕ ವೆನಿಸಿಹು |
ದಿಲಿಯು ಜಗದೊಳು ಜನರಿಗೆ |
ಘಳಿಗೆ ನಿಲ್ಲರು ಇಲಿಯು ಬಿದ್ದೊಡೆ |
ತಿಳಿಸದಲೆ ಓಡುವರು ಬಯಲಿಗೆ ||೧||

ಮನೆಯ ಬಿಟ್ಟಡವಿಯೊಳು ಮನೆ |
ಮಾಡುವರು ನೆನೆ ನೆನೆದಿಲಿಯನು |
ಕನವರಿಸುವರು ಪ್ಲೇಗು ಪ್ಲೇಗೆಂ |
ದನವರತಮುಂ ಭಯದಿ ನಡುಗುತೆ ||೨||

ಜ್ವರವು ಬಂದೊಡೆ ತರಹರಿಸುವರು |
ಸರಿಸಕಾರುಂ ಪೋಗರು |
ಮರಣಕಂಜಲು ಸ್ಥಿರದೊಳಿರುವರೆ |
ಮರುಳುತನ ವಿನು ಭೀಮ ವರದನೆ ||೩||



# ಅಪಾತ್ರದಾನ.

(ಏನ ಬೇಡಲಿ ನಿನ್ನ  ಬಳಿಗೆ ಬಂದು ಎಂಬಂತೆ)

## ಕಾಂಬೋದಿ—ಝುಂಪೆ.

೫೩. ಏನೆಂದು ಹೇಳುವೆನೊ ದೀನ ಬಂಧು |
ನೀನಲ್ಲದಿತರರಿನ್ನುಂಟೆ ಕರುಣಾ ಸಿಂಧು ||ಪ||

ದಾನ ಧರ್ಮಕ್ಕಿಲ್ಲ ದೀನ ಜನಗಳಿಗಿಲ್ಲ |
ಜ್ಞಾನಕ್ಕೆ ಮೊದಲಿಲ್ಲ ಮಾನಕ್ಕಿಲ್ಲ ||
ಜೇನು ಸಕ್ಕರೆಗಿಲ್ಲಿ ದೇನು ಕಲಿಕಾಲವೋ |
ಭಾನು ಕೋಟಿ ಪ್ರಕಾಶ ನೀನು ನೋಡಯ್ಯ ||೧||

ದಂಡ ದೋಷಕ್ಕುಂಟು ಪುಂಡಜನಗಳಿಗುಂಟು |
ಹೆಂಡ ಸಾರಾಯ ಭಂಗಿಗಳಿಗುಂಟು ||
ಕೊಂಡಿಮುಂಚರಿಗುಂಟು ಭಂಡನೀಚರಿಗುಂಟು |
ಖಂಡೇಂದುಧರ ನೋಡು ಕಲಿಯ ಮಹಿಮೆಯನು ||೨||

ಸೂಳೆಯರ ಮೇಳಕ್ಕು ಹಾಳು ದ್ಯೂತಕ್ಕು ಮೇಣ್ |
ಕಾಳ ಮೂಳರಿಗುಂಟು ಕೇಳು ಶಂಭು |
ಮೇಲು ಶಿವ ಹರಿಕಥೆಗಳನು ಕೇಳುವವರಿಲ್ಲ |
ನೀಲಕಂಧರ ಭೀಮರಾಜ ವಂದಿತನೇ ||೩||

## ಸಾಂಬನನ್ನು ನಂಬುವುದರಿಂದಾಗುವ ಫಲ.

(ದೂರನೋಡುವರೆ ರಂಗಯ್ಯ ಎಂಬಂತೆ)

**ಶಂಕರಾಭರಣ—ರೂಪಕ.**

೫೪. ನಂಬು ನೀಂ ಮನುಜ, ಶ್ರೀ ಶಂಭುವನ್ನು ||ಪ||

ನಂಬಿ ಕೆಡುವರುಂಟೆ ಜಗದಿ |
ಸಾಂಬಶಿವನ ನೆನೆಯೊ ಮನದಿ |
ಹಂಬಲ ಬಿಡಿಸುವನು ಜವದಿ |
ಯಿಂಬುಗೊಡುವನಯ್ಯ ಭರದಿ ||ಅ||

ಮೃತ್ಯುವೆಂಬುವುದು,
ಎಂದೆಂದಿಗು ಹತ್ತಿ ಬಾಧಿಪುದು ||
ಮತ್ತೆಲ್ಲಿಪೋದೊಡಲ್ಲಿ ಪಿಡಿಪುದು |
ಮೃತ್ಯುಂಜಯನ ಸೇರಿದವನು |
ಮೃತ್ಯುವಿಗೆ ತುತ್ತಾಗನವನು |
ನಿತ್ಯತೃಪ್ತನಾಗುವನು, ಸತ್ಯವಿದುವೆ ತಿಳಿವುದಿನ್ನು ||೧||

ಅಷ್ಟಭೋಗವ ಕೋರಲು, ನಷ್ಟವಾಗುವುದು |
ಈ ವಿವರವೈದೆ ಸ್ಪಷ್ಟವಾಗಿಹುದು ||
ದ್ರಿಷ್ಟಿತ್ರಯನ ಪದವ ಪಿಡಿದ, ಶಿಷ್ಟಮಾರ್ಕಾಂಡೇಯ ಪಡೆದ
ಕಷ್ಟಗಳನು ನೀಗಿ ಸುಖದ,ಪಟ್ಟವನ್ನು ಪಾವನನಾದ ||೨||

ಪ್ರೇಮವಸ್ತುವು ಸಂಪದವು, ಸೇರಿನಿರ್ನಾಮವಾಗುವುವು |
ಕಾಮಿತಗಳೊಂದು ಉಳಿಯಲಾರವು ||
ಭೀಮರಾಜ ವರದನೆನಿಪ,ಸೋಮಮೌಳಿಯ ಸಾನ್ನಿಧ್ಯವು
ಶ್ರೀಮದಮಲಸಾಯುಜ್ಯವು,ಕ್ಷೇಮಕರವು ಸಂತತವು ||೩||

## ಜೋಗಿ, ಜಂಗಮ, ದಾಸರು.

### ಸಾವೇರಿ—ಅಟತಾಳ.

೫೫. ವೇಷ ಭಾಷೆಗಳೆಷ್ಟೋ, ದೋಷಕಾರ್ಯಗಳೆಷ್ಟೋ ।
ಮೋಸಗಳಿನ್ನೆಷ್ಟೋ ಜಗದಿ ॥ಪ॥

ದಾಸರು ನಾವೆಂದು, ಆಶಾಪಾಶದೊಳ್ನೊಂದು ।
ನಾಶವಾಗುವರಯ್ಯೋ, ಕ್ಲೇಶದೊಳವರು ॥
ಈಶ ನೀನುಪಹಾಸ ಗೈಯ್ಯದೆ, ಲೇಸನೆಸಗುಮಹೇಶನೆ ।
ಕಾಸಿನಾಸೆಗೆ ದಾಸರಾದರು, ವಾಸನೆಯ ತಾವರಿಯರು॥೧॥

ಜೋಗಿ ಜಂಗಮರೆಂದು,
ಭೋಗಭಾಗ್ಯದೊಳ್ಮಿಂದು ।
ನಾಗಭೂಷಣನಿಗಿಂತಧಿಕರಾವೆಂದು ॥
ಕೂಗಿಕೊಳ್ಳುತೆ ಬೂದಿ ಬಳಿದವರಾಗಿ,
ರಾಗಿಗಳಾಗಿ, ಶಾಂತಿಯನೀಗಿ ।
ಶಮದಮತ್ಯಾಗಿಗಳುತಾವಾದರಯ್ಯೋ ॥೨॥

ಜಡೆಗಳ ಕಟ್ಟಿ ಕಾವಿಯಹೊದ್ದಮಾತ್ರದಿ ।
ಮೃಡನಾಗಬಲ್ಲನೆ ಜಗದೊಳಗವನು ॥
ಮಿಡತೆ ಹಾರುವುದಾದೊಡೇಂ ।
ಕಡುಗಲಿಯು ಮಾರುತಿಯೆನಿಪುದೇ ।
ಜಡತೆಯುಳಿದಾ **ಭೀಮ** ವರದನ ।
ಅಡಿಗಳನು ಪಿಡಿವವನೆ ಧನ್ಯನು ॥೩॥

## ತಂದೆಯು ಅನುಗ್ರಹಕ್ಕಾಗಿ ತಾಯಿಯಲ್ಲಿ ಪ್ರಾರ್ಥನೆ.

(ಪಾವನೆ ಗೋದಾವರಿ ಎಂಬಂತೆ)

ತೋಡಿ—ಆದಿತಾಳ.

೫೬. ಮಾತೆ ನೀಂ ಪೇಳಬಾರದೆ ||
ತಾತನದೇತಕೆ ಮಾತುಗಳಾಡನು |
ಪ್ರೀತಿಸದಿರ್ಪನು ನೀತವೆನಿದು ||ಪ||

ತಾಯೆ ನಿನ್ನೊಳು,ಬಾಯ ತೆರೆದೆನ್ನ |
ಕಾಯೆಯೆಂಬೆ ವಿಧೇಯನಾಗುತೆ ||
ಕಾಯಜ ವೈರಿಗೆ ನ್ಯಾಯವೇನೊ ಕೇಳ್ |
ಕಾಯಜಾತರೊಳು ಪಕ್ಷಪಾತ ||೧||

ಕಂದ ಗಣಪನ, ಮುಂದಿರಿಸಿ ತಾ |
ನೆಂದು ಅಗಲದೆ, ಬಂಧಿಸಿರುವನು ||
ನಂದಿಯು ನಿಂದಿಹನೆಂದುಂ ಪದದೆಡೆ |
ಮಂದಭಾಗ್ಯನನು ಬಳಿ ಸೇರಿಸೆ ||೨||

ಹೆತ್ತ ತಾಯಿಗೆ, ಮುತ್ತುಹೆಗ್ಗಣ |
ಮತ್ತೆ ತಂದೆಗೆ ಪೇಳೌ ಗೌರಿಯೆ ||
ಹತ್ತಿರ ಸೇರಿಸು **ಭೀಮ**ನು ತಾನಿ |
ನ್ನೆತ್ತ ಪೋಪನೆನ್ನುತ್ತ ನಯದಿ ||೩||

# ಗರ್ವ.

(ಎಷ್ಟು ಪೊಗಳಲೊ ನಾನು ಎಂಬಂತೆ)

ಮಧ್ಯಮಾವತಿ—ಆದಿತಾಳ

೫೭. ಬರಿದೆ ಗರ್ವವದೇಕೆ | ಅರಿತರಿತು ನಡೆನುಡಿ ನರವು
ನುಜ ನೀಂ ಜೋಕೆ | ನೆರೆಹೊರೆಯ ಜನರನು ವಂಚಿ
ಸುವುದು ಪರಾಕೆ | ಹರನಿರುವ ಜಗಕೆ || ಪ ||
ಹುಟ್ಟು ಸಾವುಗಳರಿಯೆ ನೀ ಬಹು | ಗಟ್ಟಿಗನುಯ
ನ್ನುತ್ತ ಪೇಳುವೆ | ಅಟ್ಟಹಾಸವದೇತಕೀಪರಿ | ಕೆಟ್ಟ
ನಡತೆಯ ಬಿಟ್ಟು ಬಾಳೆಲೊ || ಅ ||

ಮೂರು ದಿನಗಳ ಬಾಳು | ಯಾರಿರುವರಿಲ್ಲಯೆ
ಲಯವ ಪೊಂದದೆ ಪೇಳು | ದೂರದಿರು ತಾಳು ||
ವೀರ ಧೀರರುದಾರರೆನಿಬರೊ | ಧಾರುಣೀ ಗತರಾದ
ರುಳಿಯದೆ | ಮಾರಿ ದುರಹಂಕಾರಿ ತಾರಕ ಶೂರ
ಪದ್ಮರದೇನ ಪಡೆದರು || ೧ ||

ವಜ್ರದೇಹವಿದಲ್ಲ | ನೀಂ ಬಹು ವಿಜೃಂಭಿಸೆ ಲಕ್ಷ
ವಾಯುವದಿಲ್ಲ | ತಿಳಿದಿರುವೆಯಲ್ಲ || ದುರ್ಜನರ
ನೆರವಿಯೊಳುಸೇರುತೆ | ಸಜ್ಜನರ ಹಿಂಸಿಸಲು
ಬೇಡೈ | ಅಬ್ಜ ರಿಪುಧರ ದುರ್ಜನರ ಶಿಕ್ಷಿಸುತೆ ಸುಜ
ನರ ಪೊರೆವ ನನುದಿನ || ೨ ||

ಉಸಿರು ಚೀಲವೀದೇಹ | ಹಸಿದೊಗಲು ಮಾಂಸಾ
ಸ್ಥಿಗಳು ರಕ್ತದ ಗೇಹ | ಸ್ಥಿರನೆಂಬರೇನಹ || ಮಿಸುಕಿ
ದೊಡೆ ರೋಗಾದಿಗಳು | ಕಸವಿಸಿಯ ಮಾಳ್ಪವು
ಶತೃವಂದದಿ | ಕುಸುಮ ಶರಹರ **ಭೀಮ**ರಾಜಾ
ರ್ಜಿತನ ನಾಮೌಷಧಿಯ ಸೇವಿಸು || ೩ ||

# ಶ್ರೀಮಂತಿಕೆ-ಧೀಮಂತಿಕೆ.

(ಬಡತನವು ಸಾಕೊ ನಮ್ಮಪ್ಪ ಎಂಬಂತೆ)

**ತೋಡಿ—ಆದಿತಾಳ**

೫೮. ಶ್ರೀಮಂತಿಕೆಯದು ಬಹು ಚಿಂತೆ |
ಧೀಮಂತಿಕೆಯದು ಸ್ವಾಂತಕ್ಕೆ ತೋಷವಂತೆ || ಪ

ಶ್ರೀಮಂತನು ಧನ ಧಾನ್ಯವನು ಹೇಮವನು
ಪ್ರೇಮ ವಸ್ತುಗಳ ಕಾದಿರುವನು || ಅ

ಕಳ್ಳನಪಹರಿಸಲಲ್ಲಲ್ಲಿಗೆ ತವೆ |
ಕೊಳ್ಳೆಪೋಗುವವು ನಿಲ್ಲದಲೆ |
ತಲ್ಲಣಿಸುವ ಮಿತಿಯಿಲ್ಲದ ದುಃಖದಿ |
ಉಲ್ಲಾಸವ ಕಳೆಯುತೆ ಧನಿಕನು || ೧

ವಿದ್ಯಾ ಧನವನು ಕದ್ದುಕೊಳ್ಳನಭಿ |
ವೃದ್ಧಿ ಪೊಂದುವುದು ವೆಚ್ಚವಾದನಿತು |
ಸದ್ಯಃ ಫಲವು ಸಮೃದ್ಧ ಸೌಖ್ಯವು |
ಉದ್ಧರಿಸುವುದಿಹ ಪರವನು ಸಾಧಿಸಿ || ೨

ಸುಜ್ಞಾನಾರ್ಜನ ವಿದ್ಯೆಯೆ ವಿದ್ಯೆಯು |
ಅಜ್ಞಾನಾರ್ಜನ ಯದು ಮೃತ ವಿದ್ಯೆ |
ಅಜ್ಞ **ಭೀಮ**ರಾಜ ವರದನ ನುತಿಸುವ |
ಪ್ರಾಜ್ಞತೆಯಿಾವುದು ಸದ್ವಿದ್ಯೆಯು || ೩

## ಶಿವನೇ ದಯಾಕರನು.

(ಕೃಪಾಸಾಂದ್ರ ಸುರವಿನತ ಎಂಬಂತೆ)

ರಾಗ—ಝಂಪೆ

ಶೀ. ಮಹಾದೇವ | ಸುಗುಣಾರ್ಣವ |
ಮಹಾಮಹಿವಭಾವ |ಬಹುಭಕ್ತ ಸಂಜೀವ || ಪ ||

ಅಹಿಪ ಭೂಷನೇ | ಕುಹಕ ಜನವಿದಾರನೆ |
ಬಹುಭಾರ ಕರ್ತನೆ | ವಿಹಿತ ವರ ಪ್ರದಾತನೆ || ಅ ||

ಕೋಪಾನಲನಂ ತಂಪಿಸಲ್ ಸುಮ |
ಚಾಪಾರಿಯೆ ನೀಂ ದಕ್ಷನೈ |
ತಾಪತ್ರಯಗಳ ನೀಗು ನೀ |
ನಾಪದ್ಬಾಂಧವ || ೧ ||

ನಾನಧಿಕನು ತಾನಧಿಕನೆನ್ನುತೆ |
ನಾನತ್ವದಿ ಮೈ ಮರೆಯುತೆ |
ಕಾನನವಂ ಸೇರಿತು ಮುಂದೆ |
ನೀನೆ ಗತಿ ಮತಿ || ೨ ||

ಕೊಡು ಶಾಂತಿಯ ನೀಂ ಮನಕೆ |
ಪಡುವುದು ತಹ ತಹವ ಮಿಗೆ |
ಜಡಮತಿಯದು ತೊಲಗೆ |
ಮೃಡನೆ ಭೀಮಗೆ || ೩ ||

# ವಿಚಾರ ಶೂನ್ಯತೆ.

(ಪೋರಾಡುರ ನೀರಜನೇತ್ರ ಎಂಬಂತೆ)

ಕಲ್ಯಾಣಿ—ಆದಿತಾಳ

೬೦. ದೂರವರು ಮಾರಹರನ | ಈರೀತಿಯೊಳ್ || ಪ
ಸಾರಾಸಾರ ವರಿಯದ | ಪಾಮರರು ಜನದೊಳು || ಅ

ನೆರೆ ನಂಬಿ ಹಿರಣ್ಯಕನು |
ಮರಣವನು ಪೊಂದಿದನು |
ಗುರುವೆಂದ ರಾವಣ ತಾನು |
ಹರಣವ ನೀಗಿದನೆಂದು || ೧

ಬಲುಮೆ ತಮಗಿರ್ಪುದೆಂದು |
ಬಲು ಗರ್ವದಿ ಶಿಷ್ಟರಿಗೆ |
ಕಳವಳವನಿತ್ತೊಡದು |
ವಿಲಯಗೈಯ್ಯದಿರ್ದಪುದೆ || ೨

ನಂಬಿದ ಸಾತ್ವೀಕ ಶ್ವೇತ |
ನೆಂಬುವನ ಪಾಲಿಸಿದ |
ನೆಂಬುದರಿತನಿಶವು |
ನಂಬಿ ಭೀಮಪಾಲನನು || ೩

## ಪ್ರಸನ್ನನಾಗೆಂದು ಬೇಡುವಿಕೆ.

(ಮನಸು ಕರಗದೇಮೋ ಎಂಬಂತೆ)

ರಾಗ—ಆದಿತಾಳ

೬೧. ಹಟವ ಮಾಳ್ಪು ದೊಳಿತೇನೈ |
ನಿಟಿಲಾಕ್ಷನೆ ಯನ್ನೊಳಿಂತು || ಪ ||

ಕಠಿಣ ಮನೋಭಾವವಿದೇಂ |
ವಿಕಟನು ನೀನಾದೆಯ ಪೇಳ್ |
ಪ್ರಕಟ ಯಶವದೇತಕಿಹುದು |
ಅಕುಟಿಲ ಶಿವ ದೇವನೆಂದು || ೧ ||

ಮೊರೆ ಬಿದ್ದವರನು ಪೊರೆವ |
ದೊರೆಯನು ತರಿತೆನೊ ನಿನ್ನಂ |
ಕರೆ ಕರೆ ಪಡುವನ ನೋಡುತೆ |
ಕರೆಯದಿರುವರೇನೊ ಬಳಿಗೆ || ೧ ||

ಪಾಮರ ಜಡ ನಾನನಿಶಂ |
ತಾಮಸದೊಳು ಗೈದ ದೋಷ |
ನೀ ಮನ್ನಿಸಿ ಕಾಯೊಸ್ವಾಮಿ |
ಭೀಮರಾಜ ವರದ ದೇವ || ೨ ||

# ಯಮನಾಳ್ಗಳ ಭಯ.

(ಎಪುಡುಕೃಪಗಲ್ಗುನೋ ಎಂಬಂತೆ)

ಮುಖಾರಿ—ಆದಿತಾಳ

೬೨. ತರಹರಿಸುವೆ ಭವ |
ಹರ ಪೊರೆ ದೇವ ದೇವ || ಪ ||

ಕರದ ಖಡ್ಗವು ದುರ |
ದುರ ನೋಳ್ಪ ಕಂಗಳು |
ತೆರೆದ ನಾಲಗೆ ವೋರೆ |
ತಿರುಗಿದ ಕೋರೆ ನೋಡಿ || ಅ ||

ಬಿಟ್ಟ ಪಲ್ಗಳು ನೆರೆ |
ಕೆಟ್ಟ ಮೋರೆಯು ಬಹು |
ದಟ್ಟವಾಗಿಹ ಕೇಶ |
ಹೊಟ್ಟೆಯಾಕೃತಿ ನೋಡಿ || ೧ ||

ತನುವಿನ ಕಪ್ಪನು |
ಮನದ ಕಾಠಿಣ್ಯವನು |
ನೆನೆ ನೆನೆ ದನುದಿನ |
ಕನವರಿಸುವೆ ಶಿವ || ೨ ||

ರಕ್ತವರ್ಣಾಂಬರ |
ಚಿತ್ರಿತ ಯಮದೂತರ |
ಇತ್ತ ನೋಡ್ಯೈ ಶಂಕರ |
ಭೃತ್ಯ ಭೀಮ ವರದ || ೩ ||

## ಅಜ್ಞಾನ.

(ರಾಮನಾಮವನ್ನು ನೆನೆಮನವೆ ಎಂಬಂತೆ)

**ಮೋಹನ—ರೂಪಕ**

೬೩. ಬಂದ ರಾತ್ರಿಗಳ್ಬಂದು ಪೋಗುವವು |
ಕ್ರಮದಿಂದ ಲನಿಶಂ |
ಬಂದ ಹಗಲೆ ಬರುತಲಿರ್ಪುವು || ಪ ||

ಬಂದ ವಾರಗಳೆ ಬರುವವು |
ತಿಂದರುಚಿಯೆ ತಿನ್ನುತಿಹೆವು || ಅ ||

ನೋಡಿದುದನೆ ನೋಡುತಿರ್ದು |
ಮಾಡಿದುದನೆ ಮಾಡುತಿರ್ದು |
ನಾಡೆ ಹೇಯವೆಂದು ತಿಳಿಯ |
ದಾಡಿ ಪಾಡಿ ನಲಿವರಮ್ಮಮ || ೧ ||

**ಕಾಂಬೋದಿ**—ಪ್ರತಿಕ್ಷಣದೊಳು ಪ್ರಾಣಿಕೋಟಿ |
ಗತಿಸಿ ಯಮನ ಸದನ ಪೊಗುವ | ಗತಿಯ
ನರಿತುಸ್ಥಿರವಿದೆಂದು | ಗತಿಪರುದುರ್ಗತಿಯೊಳ್ನರರು || ೨ ||

**ಶಂಕರಾಭರಣ**—ಮೃತ್ಯು ವಶದೊಳಿರುವ ಲೋಕ |
ವೆತ್ತ ನುಸುಳಿ ಪೋಗುವುದು | ತುತ್ತಾಗುವುದೆಂದಿ
ದೋರ್ಡುಂ | ಮತ್ತೆ ತಿರುಗಲಿಯ ದವಸದೋಲ್ || ೩ ||

**ಕಾನಡ**—ಸತ್ತು ಹುಟ್ಟುವ ಹುಟ್ಟಿ ಸಾಯುವ |
ಸುತ್ತು ತೊಡಕು ನೋಡುತಿರ್ದು | ಮತ್ತೆ ಮತ್ತೆ
ಭವಾಬ್ಧಿಯಲ್ಲಿ | ಸುತ್ತಿ ಸುತ್ತಿ ಬಳಲುತಿಹರು || ೪ ||

**ಭೂಪಾಳಿ**—ವ್ಯೋಮಕೇಶನೆನಿಪ ದಾಸ |
**ಭೀಮ**ರಾಜ ವರಗಹರನ | ನಾಮ ಸ್ಮರಣೆಯೊಂದೆ
ಭವನಿ | ರ್ನಾಮವೆನಿಸಿ ಮೆರೆವುದಿಳೆಯೊಳ್ || ೫ ||

## ದೊಡ್ಡಸ್ತಿಕೆ.

(ತನವಾರಿತನವು ಎಂಬಂತೆ)

### ಬೇಗಡೆ—ಆದಿತಾಳ

೬೪. ದೊಡ್ಡವರು ಧರೆಯೊಳೆಲ್ಲರು |
ದೊಡ್ಡಸ್ತಿಕೆಯು ಜರುಬಿಸೊಳಿಹುದು || ಪ ||

ಹ್ಯಾಟು ಕೋಟು ಪೆಂಟ್ಲಂ, ಬೂಟು ಕೈಯ್ಯಬೆತ್ತಂ |
ಪೇಟ ನೆಕ್ಟೈ ಕಾಲರ್, ಬೂಟಕದ ಜನರು || ೧ ||

ವಾರೆ ಕ್ರಾಪು ನಿತ್ಯ, ಕ್ಷೌರ ಪೋಟೋಗ್ರಾಫು |
ಸಾರೆಗು ಮಿಂಗ್ಲೀಷು, ಈ ರೀತಿ ಷೋಕಿನ || ೨ ||

ಹುಲಿಯ ಪಟ್ಟೆ ಸೋಡಿ, ಛಲದಿ ನರಿಯು ಬರೆಯ |
ನ್ನೆಳಸಿಕೊಂಡ ತೆರದಿಂ, ಖಲರು ಕೆಡುವರಿನ್ನುಂ || ೩ ||

ಆಸ್ತಿಕತೆಯ ನೀಗಿ, ನಾಸ್ತಿಕರು ತಾವಾಗಿ |
ಸಿಸ್ತಿಗೆ ಮರುಳಾಗಿ, ವಾಸ್ತವ ವರಿಯದ || ೪ ||

ರಾಜಮೌಳಿ **ಭೀಮ**, ರಾಜ ವರದನನ್ನು |
ಪೂಜೆ ಗೈಯ್ಯ ದಿರ್ಪ, ತೇಜಹೀನ ನರರು || ೫ ||

## ನಿನ್ನಲ್ಲೇನಿರುವುದು.

(ನಗುವರಲ್ಲೊ ರಂಗಯ್ಯ ನಿನ್ನಾಟವ ಎಂಬಂತೆ)

**ಜಂಝೂಟಿ—ಅಟತಾಳ**

೬೫. ಏನು ಕೇಳಲಯ್ಯ ನಿನ್ನ ಮಾನವಿಲ್ಲದೆ | **ಶಂಭು** |
ದೀನತನವ ನೀಗುಯೆನಲದೇನಿರ್ಪುದು ನಿನ್ನೊಳ್ | ಶಂಭು ||ಪ||

ಅನ್ನವ ನೀಡೆನಲು ನೀನೇ ಬನ್ನ ಬಡುತಲಿ |
ಮುನ್ನತಿರಿದು ತಿನ್ನುವೆ ನಂಜುಂಡು ಕೂತಿಹೆ || ೧ ||

ಬಟ್ಟೆ ಬರೆಯು ಕೇಳಲು ನೀನುಟ್ಟಿಹೆ ಗಜಚರ್ಮ |
ಇಷ್ಟ ಮಿತ್ರರ ಕೋರುವೆನೆ ಅನಿಷ್ಟ ಭೂತಗಳು || ೨ ||

ಒಡವೆ ವಸ್ತುಗಳನು ಕೇಳಲ್, ಕಡಿವ ಸರ್ಪಗಳು |
ಮೃಡ ನಿನ್ನಡಿಯ ಪಿಡಿವ ಬುದ್ಧಿ ಕೊಡು **ಭೀಮ**ಪಾಲ || ೩ ||

## ವೇದ ಮೂರ್ತಿ.

(ಸಾಕೇತ ನಗರನಾಥ ಎಂಬಂತೆ)

ಅಠಾಣ—ರೂಪಕ.

೬೬. ವೇದ ಕೃತನೆ ದೇವ |
ಮೊದ ಸದನಭಾವ | ಪಾದ ನತರ ಕಾವ ||ಪ||

ಆದಿ ಮೂಲ ನಿನ್ನ ನಂಬಿ ||
ಸಾದರದಿಂದೀ ದಿನದಲಿ |
ಭೂಧವ ಮಾಡುವೆ ಧ್ಯಾನವ |
ನೀದಯದಿಂದೀರಾಜ್ಯಕೆ ಮೋದದೆ ಮಂಗಳ ವೀವುದು||ಅ||

ಅನುಪಮ ವರ ಚಿನುಮಯಾತ್ಮ |
ಜನಿತ ಜಾತ ಪಾಲಿತನೆ ಶ್ರೀ || ಅನಘಕೃಪಾಕರದೇವನೆ
ದಿನಪಾದಿಭುವನ ನಿರ್ಮಿತ | ಜನನ ಮರಣರಹಿತನೆ
ಅನುದಿನ ಭರತಾವನಿಯನು ಪೊರೆ ||೧||

ಮಂಗಳಕರ ಭಂಗ ದುಷ್ಟ ತ್ರಿಲಿಂಗವ್ಯಾಪಕ ||
ತುಂಗ ಕೃಪಾಕರ ಸಖ ಸಾ |
ನಂಗೈಕೇಶ್ವರ ದೇವನೆ, ಮಂಗಳ |
ವೀವುದು ಸೇವಕ **ಭೀಮ**ರಾಜ ವರದ ಮಿತ್ರ ||೨||

## ಪಾಪ ಹರ.

(ವೆಂಕಟೇಶ ವಿಠಲ ಶ್ರೀ ಎಂಬಂತೆ)

**ಕಮಾಚು—ರೂಪಕ.**

೬೭. ಆನಂದ ರೂಪ ವಿಭವ | ಆನಂದ ||ಪ||

ಆನಂದೀಶಾದಿ ಗಣ, ನಮಿತಚರಣ ಅಮಿತ ಕರುಣ ||
ಆನಂದನ ಗಣಪ ಪ್ರಮುಖ, ರಾನಂದಾಂಬುಧಿಚಂದಿರ |
ದೀನದಯಾಪರ ಬುಧಸಮ್ಮಾನಿತ ಮನುಮುನಿವಂದಿತ ||ಅ||

ದೇವಾ, ಪಾವನ ಪರತರ ಭಾವಸು | ದೇವಾ ||
ಭಾವಜ ವೈರಿಯೆ ಕೋವಿದ | ರಾವಗ ಮುಂ ಭಜಿಸುತೆ ನೆರೆ |
ಪಾವನರಾದರು ಧರೆಯೊಳು | ಸಾವನು ಜನವವನರಿಯದೆ||೧||

ಈಶಾ, ದೋಷೌಘತಮೋರಾಸಿ ದಿನೇಶಾ ||
ಆಶಾಪಾಶಚ್ಛೇದ ವಿನಾಶಕಾರಿ ಶ್ರೀ ಶಾರ್ಚಿತ |
ದಾಸ **ಭೀಮ**ರಾಜ ವರದ ಪೋಷಿಸು ಭಾರತಮಾತೆಯ ||೨||

---

# ನಾಮ ಮಹಾತ್ಮೆ.

(ದೇವಿ ಮೀನಾಕ್ಷಿ ಮುದಂ ಎಂಬಂತೆ)

**ಕಲ್ಯಾಣಿ—ಆದಿತಾಳ.**

೭೨. ಪಾಹಿ ಶ್ರೀ ಶೈಲ ಜೇಶ | ಪಾಹಿ ಮಹೇಶ ||ಪ||
ಶ್ರೀ ಹರಿಯಜ ಮುಖ್ಯ ದೇವ |
ವ್ಯೂಹವಂದಿತಾಂಘ್ರಿಯುಗಳ |
ನೀ ಹರುಷದೆ ದೇವೇಶನೆ |
ತಾಹತ ಪಡುವರ ಪಾಲಿಸೊ ||

ಆಹವದೊಳು ತ್ರಿಪುರರ ನಂ |
ದೂಹಿಸದಲೆ ಭಸ್ಮ ಗೈದ |
ಸಾಹಸಿ ಸಾಂಬಸದಾಶಿವ |
ದೇಹಿಯ ಪೊರೆ ಕರುಣಾಬ್ಧಿಯೆ ||೧||

ಜಯ ಜಯ ಶಂಕರ ಶುಭಕರ |
ಜಯ ಭಕ್ತ ವಶಂಕರ |
ಜಯ ನಿರ್ಜರ ಪೂಜ್ಯ ಜಯತು |
ಭಯ ನಿವಾರಕ ||

ಲಯಕರ್ತೃವಿಧೇಯರೊಳ |
ಭಯವ ನೀಡುತೆ ದಯೆ ದೋರ್ಬೈ |
ಜಯವೀಯುವುದು ಸ್ವದೇಶಕೆ |
**ಜಯಕೆಯಂತೆ ಭೀಮ ಪ್ರೇಮ** ||೨||

# ಸ್ತ್ರೀ ರಾಕ್ಷಸಿಯರು.

(ಖ್ಯಾತ ಶಂಖಚಕ್ರ ಧರನೆ ಎಂಬಂತೆ)

## ತೋಡಿ—ರೂಪಕ.

೬೯. ಪಾಯ ಶುದ್ಧಿಯಿಲ್ಲದಲ | ಪಾಯವಾಗುತಿರುವುದು |
ನ್ಯಾಯಕಾರಿಯಾದ ನೀನು | ಪಾಯದಿಂದ ರಕ್ಷಿಸೈ ||ಪ||

ನಾರಿಯರಿಳೆಯಲ್ಲಿ ಹೆ | ಮ್ಮಾರಿಯರೆನಿಸಿ |
ಘೋರ ಪಾಪ ಕಾರ್ಯವನ್ನು | ಮೀರಿ ಮಾಳ್ಪರು ||೧||

ಪತಿಗೆ ವಿಷವನುಣಿಸಿಕೊಂದುಪ | ಪತಿಯಸೇರುತೆ |
ಕ್ಷಿತಿಯೊಳತ್ತೆ ಮಾವಂದಿರ ಪಿಡಿದು ಬಡಿವರು ||೨||

ರಾಕ್ಷಸಿಯರ ಕುಕ್ಷಿಯೊಳವತರಿಸಿದ ನರರು |
ರಾಕ್ಷಸರಾಗರೆ ಜಗದೊಳು ಲಕ್ಷಿಸರಿದನು ||೩||

ಜನನಿಯರಿಳೆಯಲ್ಲಿ ಅನಘರಾಗಲುಳಿದ ಸಂತತಿ |
ಘನತರವೆನಿಸುತ್ತೆ ಮೆರೆವುದಖಿಳ ಭಾರತಾವನಿ ||೪||

ಹಿಂದು ಪ್ರಮುಖರಿಂದು ಹಿಂದುಳಿದ ಭಗಿನಿಯರ |
ಮುಂದಭಾಗ್ಯರೆನಿಪ ಜನರ ಮುಂದರಿಪುದು **ಈಭಿಮವರದ** ||

# ನಾಮ ಸ್ಮರಣೆ.

## ನಾಟ—ಅಟತಾಳ.

೭೦. ಶಂಭೋ ಸದಾಶಿವ ಶ್ರೀ, ಶುಂಭಾರಿಪ್ರಿಯ |
ಸೋಮಶೇಖರ, ಕುಂಭಿನಿ ಪಾಲಕ ||ಪ||

ಅಂಬರ ಕೇಶ, ಶಂಬರ ರಿಪು ಮದನಾಶ |
ಕುಂಭಜ ಮುಖ ಮುನಿ ಪೋಷ, ದೇವೇಶಾ |
ಅಂಬುಜ ಜಾನುತ, ಸಂಭ್ರಮಸಯ್ಯುತ ಪರಹಿತ ||ಅ||

ವೇದಾಗಮನುತನೇ, ಸುಹಿತನೇ |
ಮುಕ್ತಿ ಪ್ರದನೇ, ಭಕ್ತ ವರದನೇ ||
ಶ್ರೀ ಕಲ್ಯಾಣ ಗುಣಾತ್ಮಕ ಶಂಕರ |
ನಾಕಾಧಿಪ ವರಸ್ತುತ್ಯ ಶುಭಂಕರ |
ಲೋಕೇಶ ಮಹಾಮಹಿಮ ಗಣೇಶ್ವರ |
ನೀ ಕೃಪೆ ಮಾಡೈ **ಭೀಮ** ವರದ ಹರ ||೧||

# ನಿರ್ಭಯಂ.

(ಇನ್ನೇಕೆ ಯಮನ ಬಾಧೆಗಳು ಎಂಬಂತೆ)

ಆನಂದಭೈರವಿ—ಅಟತಾಳ.

೭೧. ಯಾರ ಹಂಗೇನುಂಟು ಯನಗೆ | ಧೀರನಾಗೆ ||ಪ||

ಮಾರ ರಿಪು ನಿನ್ನ ನಾಮದ ಬಲುಮೆ ಬಲವಾಗೆ ||ಅ||

ಯಮನು ಕಂಪಿಪ ನಿನ್ನ ನೋಡಿ |
ಯಮ ನಾಳ್ಗಳು ತರಹರಿಸುವರುಬಿಟ್ಟೋಡಿ |
ನಮ ಶಿವಯೆಂಬುವರ ನೋಡಿ |
ಯಮನಲ್ಲಿ ಪೇಳುವರಮಿತ ಭಯದಿಂದ ಕೂಡಿ ||೧||

ಹಿಂಗೆ ಮಾರ್ಕಾಂಡೇಯನೊಬ್ಬ |
ಯಮಬಂದರು ಸರಕುಗೊಳ್ಳದೆ ಶಿವಧೋಯೆಂದು |
ಬಂಧನದಿಂ ಮುಕ್ತನಾದ |
ತಂದೆ ಶಿವ ನಿನ್ನ ನಂಬಿ ದೀರ್ಘಾಯುವ ಪಡೆದ ||೨||

ದೊರೆಯು ಮುಂದೋರ್ವ ವರಾಕ |
ನಾನೆ ದೊರೆಯೆಂದೊಡವನ ವಂಶವ ನಾಶಮಾಳ್ಪ |
ಹರ ನಿನ್ನ ಬಳಿಯೊಳಗೋರ್ವ |
ತಾನೆ ಹರನೆಂದೊಡೀವೆ ಸದ್ಗತಿ **ಭೀಮ** ವರದ ||೩||

## ಪಂಚಾಕ್ಷರ ಪಠನ.

### ಕಲ್ಯಾಣಿ—ಆದಿತಾಳ.

೭೨. ಓಂ, ನಮಃ ಶಿವಾಯ |
ಓಂ, ಪರ ಶಿವಾಯ |
ಓಂ, ಹರ ನಮಾಯ |
ಓಂ, ಭವ ಹರಾಯ ||ಪ||

ಸಾವಧಾನದಿ, ಪಾವನನಾಂ
ಶ್ರೀವದನಂ, ದೇವನೆ ನೀಂ, ಕಾವುದೆನ್ನಂ ||
ಭಾವ ಭವ ವಿಭಂಜನ ಸುರ ದೇವದೇವ ಗ್ರಾವವಾಸ ||ಅ||

ಘನ ಮಹಿಮಾಸ್ಪದನಾಗುತ್ತ ನ | ಘನು ನೀನಾಗಿರುವೆ |
ಜನಗಳ ಮನದನುತಾಪವ, ವಿನಯಾನ್ವಿತ ನೆನಿಸುವುದೈ ||೧||

ಸುಗುಣಾರ್ಣವನೇ, ಅಘ ಹೆಚ್ಚಿಹುದೈ |
ಜ | ನವನ್ನೊಗು ಮಿಗೆಯಿಂದಲಿ, ' ಮಿಗೆಪಾಲಿಸು **ಭೀಮ**ವರದ
||೨||

# ಮಾಟ.

(ಸದಾ ಯನ್ನ ಹೃದಯದಲ್ಲಿ ಎಂಬಂತೆ)

**ನಾದನಾಮಕ್ರಿಯ—ರೂಪಕತಾಳ.**

೭೩. ಮಾಟ ಮಾಳ್ಪೆವೆಂಬರು,
ನಿನ್ನಾಟ ತಿಳಿಯದಿರ್ಪ ನರರು ||ಪ||

ಬೂಟಕದಾಟವಿದಲ್ಲವೆ |
ಪಾಟಿಸಿ ನೋಡಲು ಜಗದೊಳು ||ಅ||

ಮೂಢರನ್ನು ಬೆದರಿಸಲ್ಕೆ |
ಮಾಡುತಿರುವರಿಂತು ಮೋಸ |
ಹೇಡಿತನವಿದೆಂದರಿಯದೆ |
ನಾಡೆ ಪ್ರವರ ಹೇಳುತಿಹರು ||೧||

ಕೊಲ್ವ ಕಾವ ಕರ್ತುವು ನೀ |
ನಲ್ಲದಿತರರುಂಟೆ ಜಗದಿ |
ಬಲ್ಲಿದರೆಂಬುವ ಹೊಲೆಯರು |
ಬಲ್ಲರೆ ತಮ್ಮಯ ಮರಣವ ||೨||

ಹಾವು ಕಂಡು ಹೆದರಿದವರ |
ಮೇಲೆ ಹಗ್ಗವೆಸೆದ ರೀತಿ |
ಯಾವುದೊಂದನರಿಯರಯ್ಯ |
ಕಾವುದು ನೀಂ **ಭೀಮ** ವರದ ||೩||

## ಸಮಾಜ.

(ಬಿಡು ಬಾಹ್ಯದೊಳು ಡಂಬವ ಎಂಬಂತೆ)

**ಪಂತುರಾಳಿ— ಅಟತಾಳ.**

೭೪. ನಿನ್ನ ಸಮಾಜದ ಮುಂದೆ |
ಅನ್ಯ ಜನರ ಸಮಾಜಗಳಿನ್ನುಂಟೆ ತಂದೆ ||ಪ||

ಘನ್ನ ಘಾತಕ ಜನ | ರಿನ್ನು ಸಮಾಜಗ |
ಳನ್ನು ಮಾಡುವುದರಿಂ | ದುನ್ನತಿಯೇನುಂಟು ||ಅ||

ಮ್ಯಾನೇಜರಾದೊಡೇಂ | ಜ್ಞಾನ ವಿಹೀನರು |
ನಾನೇ ನಾಂ ಪ್ರಸಿಡೆಂಟನೆನಲಿನ್ನೇನು |
ಜ್ಞಾನಪ್ರದಾನ ಸಮಾಜವೆ ಲೋಕದಿ |
ನ್ಯೂನತೆಗಳ ನೀಗಿ ನಾನತ್ವವಳಿವುದು ||೧||

ಯಜ್ಞೋಪವೀತವನಜ್ಞಗೆ ಹಾಕಲು |
ಪ್ರಾಜ್ಞನೆನಿಪ್ಪನೆ ಜಗದೊಳಗವನು |
ಯಜ್ಞಯಾಗಂಗಳು ಮಂತ್ರ ತಂತ್ರಂಗಳು |
ಸುಜ್ಞಾನ ನಿಧಿ ನಿನ್ನ ಭಕ್ತಿಯೊಳಡಗಿವೆ ||೨||

ಆಡಂಬರಕ್ಕಾಗಿ ಮಾಡಿದ ಕಾರ್ಯಗಳ್ |
ರೂಢಿಯೊಳ್ ನಗೆಗೆಡೆಯಾಗುವವು |
ನಾಡೆ **ಭೀಮ**ರಾಜ ವರದ ಮಹೇಶನೆ |
ನೀಡು ಪ್ರಪಂಚಕ್ಕೆ ಜ್ಞಾನವ ದೇವ ||೩||

# ನಿಷ್ಫಲ.

(ಬೇವು ಬೆಲ್ಲದೊಳಿಡಲೇನು ಫಲ ಎಂಬಂತೆ)

## ಮಧ್ಯಮಾವತಿ—ಛಾಪು.

ಖಿಃ. ನೀರೊಳು ಮುಳುಗಿದೊಡೇನು ಫಲ |
ಬರಿ ಗಾಳಿ ಸೇವಿಸಿದೊಡೇನು ಫಲ ||ಪ||

ನಾರುಮಡಿಯನುಟ್ಟಲ್ಲಿಂದಿಲ್ಲಿಗೆ
ಹಾರಿಬೀಳಲಿನ್ನೆನು ಫಲ ||ಅ||

ಮಂತ್ರವ ಜಪಿಸಿದೊಡೇನು ಫಲ ಕು |
ತಂತ್ರವ ಬಿಡದೆ ನಿರಂತರದೋಳ್ |
ನಿಂತ ಸ್ಥಳದಿ ನಿಲ್ಲದೆ ತಿರುಗುತ್ತಲಿ |
ಸಂತರಡೆಯೊಳಿರಲೇನು ಫಲ ||೧||

ಗುಹೆಯೊಳು ವಾಸಿಸಲೇನು ಫಲ |
ಬಹು ಕುಹಕ ಬುದ್ಧಿಯುಳ್ಳವನೆ ಖಲ |
ವಿಹಿತ ಕರ್ಮ ಧರ್ಮವನಾಚರಿಸದೆ |
ಮಹಿಮನೆಂದೊಡಿನ್ನೇನು ಫಲ ||೨||

ಶಿವ ಶಿವ ಯೆಂದೊಡದೇನು ಫಲ |
ಶಿವ ಧ್ಯಾನಮಾಡಿದೊಡಿನ್ನೇನು ಫಲ |
ಭವಹರನೊಳು ಭಕ್ತಿಯುತಾನಿಲ್ಲದೆ |
ಕವಿ ಭೀಮ ವರದನೊಲಿವನೆ ಮರುಳೆ ||೩||

## ಅನುಗ್ರಹ.

(ರಾಮುಬಾರೋ ಶ್ರೀ ಮನೋಹರ ಎಂಬಂತೆ)

ಹಿಂದುಸ್ತಾನಿ ಕಾಪಿ—ಆದಿತಾಳ

೭೬. ರಾಮನಂಥ ದೊರೆಯ ಕೊಡೋ |
ರಾಮನಂಥಾಗ್ರಜನ ಕೊಡೋ ||ಪ||

ರಾಮನ ಸದ್ಗುಣಧಾಮನ ಲೋಕಾಭಿ |
ರಾಮನಂಥ ಮಕ್ಕಳ ನೀಡೋ ||ಅ||

ಲಕ್ಷ್ಮಣನಂಥ ಸಲಕ್ಷಣ ವಂತರ |
ಸೂಕ್ಷ್ಮಮತಿಗಳಾದನುಜರ ಕೊಡೊ ನೀಂ ||೧||

ಸೀತೆಯು ಪೋಲ್ವ ಪತಿವ್ರತ ಸ್ತ್ರೀಯರ |
ನೀತಿಯುತರ ಕೊಡೊ ಭೂತಪತೇ ||೨||

ತಂದೆ **ಭೀಮ**ರಾಜ ವರದ ಮಹೇಶನೆ |
ಹಿಂದೂಮಾತೆಯು ತೋಷಿಸಳೋ ||೩||

# ಅಸ್ಪೃಶ್ಯ ನಿವಾರಣ.

(ವೀಣೆಯಕೊಡು ನನ್ನ ಪಾಣಿಗೆ ಎಂಬಂತೆ)

ಬೇಗಡ—ಆದಿತಾಳ

೭೭. ಪತಿತ ಜನಂಗಳ ಪಾಲಿಸು ದೇವನೆ |
ಶತಮೂರ್ಖರಾಗಿ ದುರ್ಗತಿಯು ಪೊಂದುವರಯ್ಯೋ ||ಪ||

ಕಾಡು ಮೃಗಗಳಂತೆ ನಾಡೆ ಚರಿಸುವರು |
ಕೇಡು ಬರುವುದೆಂಬ ಪಾಡನರಿಯುರವರು ||೧||

ಹೊರುವರು ಭಾರವ ತೆರುವರು ದಂಡವ |
ಅರಿವಿನಿತಿಲ್ಲದೆ ಮರುಗುತಲಿರುವರು ||೨||

ಅಸ್ಪೃಶ್ಯತೆಯ ನೀಗಿ ವಿಶ್ವಾಸದಿಂದಲಿ |
ವಿಶ್ವವ್ಯಾಪಕ **ಭೀಮ**ರಾಜ ವರದ ಕಾಯೋ ||೩||

## ವೇಷಧಾರಿ ಗುರುಗಳು.

(ತನುನಿನ್ನದು ಜೀವನ ನಿನ್ನದು ಎಂಬಂತೆ)

**ಕೇದಾರ—ಅಟತಾಳ**

೭೮. ಗುರುವೆಂಬುದಕೀ ಗುರುತೊಂದು ಮಾತ್ರವೆ ||ಪ||

ಅರಿಯೆ ಚೋದ್ಯವು ಮತ್ತಿದರ ವಿಚಾರವು ||ಅ||

ಕೊರಳೊಳು ರುದ್ರಾಕ್ಷಿ ಕೈಯ್ಯೊಳು ಜಪಸರ |
ಪರಿ ಪರಿ ಕಾವಿಯುಡಿಗೆ ತೊಡಿಗೆ |
ಧರಿಸಿದ ವಿಭೂತಿ ಹಾಸಿಗೆ ಹುಲಿಚರ್ಮ |
ಮಿರುಗುವ ವೇಷವಿದೇನು ನಾಟಕವೋ ||೧||

ಆನೆ ಕುದುರೆಯೊಂಟೆ ಮ್ಯಾನ ಪಲ್ಲಕ್ಕಿಗಳ್ |
ನಾನಾ ಪರಿಯ ಬಿರುದಾವಳಿಗಳ್ |
ಶ್ರೀನಿಧಿಗಳು ತಾವೆಂಬಂತೆ ಮೆರೆಯುವರು |
ಜ್ಞಾನಿಗಳಿಗೆ ಬಾಹ್ಯಾಡಂಬರವೇಕೋ ||೨||

ಶಿಷ್ಯ ಹೃತ್ತಾಪಹಾರಕ ಗುರುಗಳ ಕಾಣೆ |
ಶಿಷ್ಯ ವಿತ್ತಾಪಹಾರಕರೆಲ್ಲರೂ |
ಶಿಷ್ಯ ಭೀಮರಾಜ ವರದ ಮಹೇಶನೆ |
ಶಿಷ್ಯ ಕೋಟಿಗೆ ಮುಕ್ತಿ ಮಾರ್ಗವ ನೀಡುವ ||೩||

# ನ್ಯಾಯಕಾರಿ.

(ಮಂದಗಿರಿಧರನೇ ಶ್ರೀವರನೇ ಎಂಬಂತೆ)

ಮುಖಾರಿ—ಆದಿತಾಳ.

೭೯. ನ್ಯಾಯಾ ಸಾಗರನೇ ಮಹಾಶಯ ||ಪ||

ನ್ಯಾಯಕಾರಿ ಅನ್ಯಾಯ ವಿದಾರಿ |
ಶ್ರಿಯಃಪತಿ ಪ್ರಿಯ ಕಾಯಜ ವೈರಿ |
ಶ್ರೇಯೋದಾಯಕ ಪಾಹಿ ಪುರಾರಿ |
ಜೀಯ ಪಾಲಿಪುದು ಸತ್ಯ ವಿಚಾರಿ ||೧||

ರಾಜಾಧೀಶ್ವರ ನೀನಾಗಿರುವೆ |
ಮೂ ಜಗವನೆ ಕುಕ್ಷಿಯೊಳಿರಿಸಿರುವೆ |
ಸೋಜಿಗ ರೀತಿಯ ನಟನೆ ತೋರಿಸುವೆ |
ರಾಜಮೌಳಿ ನಿನ್ನರಿವುದ ಕಳವೇ ||೨||

ಹಿಂದುಗಳೊಳು ಪತಿತರನುದ್ಧರಿಸೋ |
ಮುಂದಾದವರಿಗೆ ಜ್ಞಾನ ಕರುಣಿಸೋ |
ಹಿಂದು ಮುಂದು ಸಮನೆಂದೆನಿಸುತಲಾ |
ನಂದ ಸಿಂಧು ಪೊರೆ **ಭೀಮ** ವರದನೇ ||೩||

## ಬಲಾಬಲರ ತಾರತಮ್ಯ.

(ಬಾರೈ ಮುರವೈರಿಯೆ ಎಂಬಂತೆ)

**ಕಲ್ಯಾಣಿ—ಆದಿತಾಳ.**

೮೦. ಜ್ಞಾನ ವಿಹೀನರು | ಬಲು ಹೆಚ್ಚಿರುವರು |
ಧ್ಯಾನ ವಿಹೀನರು | ಬಲು ಹೆಚ್ಚಿರುವರು ||ಪ||

ಸ್ವಾನುಭವಿಗಳ ಜಗದೊಳು |
ಕಾಣಲ್ಕ ಸದಳವೆನಿಸಿರುವುದು ||ಅ||

ಸರ್ವಜ್ಞರು ನಾವೆನುತಲಿ |
ಗರ್ವಾಂಧತೆಯೊಳು ಮುಳುಗುತೆ |
ಶರ್ವನ ಮರೆದನುದಿನ ಮುಂಭರ |
ಉರ್ವಿಯೊಳತಿ ದುಃಖಗೊಳುತಿಹರು ||೧||

ಬಲ್ಲಿದರೆಲ್ಲೆಲ್ಲಿಯು ಮೂಜಗ |
ದಲ್ಲಿಹ ದುರ್ಬಲರಂ ಪೀಡಿಸಿ |
ಕೊಲ್ಲುವುದನು ನೋಡುತಲಿರ್ದುಂ |
ಎಳ್ಳನಿತು ಸಹಾಯುವನೆಸಗರು ||೨||

ಸತ್ಯಾತ್ಮನು ನಿತ್ಯವು ತವೆ |
ಭೃತ್ಯರ ಸಮ್ಮೋದದಿ ಕಾವನು |
ಅರ್ಥಿಯೊಳಾ **ಭೀಮ** ವರದನಂ |
ಸ್ತೋತ್ರವ ಮಾಳ್ಪುದು ಪರಸೌಖ್ಯಂ ||೩||

## ಅವೆಯುವ ಕರ್ತವ್ಯ.

(ಸುಂದರಾಂಗನ ಪ್ರೇಮ ಎಂಬಂತೆ)

ಕೇದಾರ—ರೂಪಕ

೮೧. ನೋಡಬಾರದ ನೋಟವನು |
ನೋಡುವುದ ಕಿತ್ತೆಯ ಕಂಗಳಂ |
ಆಡಬಾರದ ಮಾತನಾಡಲು |
ನಾಡೆ ವದನವನಿತ್ತೆಯ ||ಪ||

ಕೇಳಬಾರದ ವಾರ್ತೆ ಕೇಳಲು |
ಪಾಲಿಸಿರ್ಪೆಯ ಕಿವಿಗಳಂ |
ನೀಲಕಂಧರ ನಿಗಮಗೋಚರ |
ಪೇಳಬಾರದೆ ಬುದ್ಧಿಯಂ ||೧||

ಮನದಿ ನಿನ್ನಂ ನೆನೆಯದಿತರವ |
ನೆನೆವುದನುಚಿತ ವೆಂಬುದಂ |
ಮನವರಿಕೆ ಮಾಡುತ್ತ ಮನುಮಥ |
ವೈರಿ ಪಾಲಿಸು ಜನಗಳಂ ||೨||

ಮಾಳ್ಪಕಾರ್ಯವ ಮಾಡದಿತರವ |
ಮಾಳ್ಪರಲ್ಪರು ಜಗದೊಳು |
ಕಲ್ಪತರು ಸಮ **ಭೀಮ**ವರದ ಏ |
ಕಲ್ಪ ಮಾನಸನಾಶಕ ||೩||

## ದುರ್ಜನ ಸಾಂಗತ್ಯ.

(ಕರುಣಿಸೋ ರಂಗ ಕರುಣಿಸೋ ಎಂಬಂತೆ)

ಧನ್ಯಾಸಿ—ಅಟತಾಳ

೮೨. ಸುಜನರ ಸಂಗ ಕೋರುವೆ |
ಅಜ ಹರಿ ನುತ ದುಷ್ಟರ ನೆರೆಯ ನಾನೊಲ್ಲೇ ||ಪ

ನೀಚರು ಬಂದು ವಾಚಾಮಗೋಚರವಾಗಿ |
ಊಚ ನೀಚವ ನರಿಯದೆ ಬೈಯ್ವರೋ |
ವಾಚಿಸಲಾರೆನಾಪರಿಯ ನ್ಯಾಯಾನ್ಯಾಯ |
ಗೋಚರಿಸದು ಜಗದೊಳು ಶಂಭು ಶಂಕರ ||೧

ಬಿಮ್ಮನಿದ್ದರು ಕಷ್ಟ ಸುಮ್ಮನಿದ್ದರು ಕಷ್ಟ |
ಕಮ್ಮಿ ಹೆಚ್ಚುಗಳರಿಯುವರಿಲ್ಲವ್ರೋ |
ಇಮ್ಮಹಿಯೊಳು ಸುಳ್ಳೇ ಸಮ್ಮತವಾಗಿದೆ |
ಬ್ರಹ್ಮ ಸೃಷ್ಟಿ ಕ್ರಮ ಚಿತ್ರವು ದೇವಾ ||೨

ಶಿಷ್ಟ ಶಿಕ್ಷಣ ದುಷ್ಟ ರಕ್ಷಣ ಧರೆಯೊಳು |
ದ್ರಿಷ್ಟಿತ್ರಯನೆ ಪರಿಕಿಸು ಪಾವನ |
ಭ್ರಷ್ಟರ ವಧಿಸಿ ಕಷ್ಟಗಳ ನೀಗುವ ದೊರೆ |
ಇಷ್ಟ ಭೀಮರಾಜ ವರದ ನೀನಯ್ಯ ||೩

# ನೀನೇ ದಿಕ್ಕು.

(ಕರುಣದಿ ಕಾಯೊ ಗೋಪಾಲ ಎಂಬಂತೆ)

ಕಾಂಬೋಧಿ—ಅಟತಾಳ

೮೩. ನಿನ್ನ ನಂಬಿದ ಭಕ್ತರನ್ನು ।
ಅನ್ಯಬಾಧೆಗಳೊಳು ತಿಲುಕಿಸುವರೆ ನೀನು ॥ಪ॥

ತೋರದು ಮುಂದೇನು ದಾರಿ ।
ಮಾರರಿಪು ನೀನೆ ಭಾರಕರ್ತೃವು ನಿನ್ನ ಸೇರಿ ।
ಚೀರುವೆ ಸಲಹೈ ಪುರಾರಿ ।
ಘೋರಕಿಲ್ಬಿಷಕಂಜಿ ದುಃಖಿಪೆ ಭಯಹಾರಿ ॥೧॥

ನೊಂದೆನು ಭವಬಂಧನದೊಳು ।
ತಂದೆ ನೀನೆ ಅನಾಥಬಂಧುವು ಮೂಜಗದೊಳು ।
ಬಂದೆನ್ನ ಪೊರೆ ಸಾದರದೊಳು ।
ನಂದಿಶ್ಯಂದನ ಕುಂದೆಣಿಸದಿರು ಭೃತ್ಯನೊಳು ॥೨॥

ಬಳಲುವೆ ಖಲರ ಸಂಗದೊಳು ।
ತಿಳಿವಿತ್ತು ಸೆಳೆವುದೆನ್ನ ನೀಂ ಸನ್ಮಾರ್ಗದೊಳು ।
ಬಳಿಕ ಸೇರಿಪುದು ಪಾದದೊಳು ।
ಒಲಿವುದು ಭೀಮರಾಜ ವರದನೆ ಶೀಘ್ರದೊಳು ॥೩॥

---

## ರಾಜ ಪ್ರಜೆಗಳು.

(ಈ ವನವದೇವರ್ನಿಪೆ ಎಂಬಂತೆ)

ಕೇದಾರ—ಆದಿತಾಳ

ಪಳ. ಲೋಕವ ಪಾಲಿಸುವ |
ಶ್ರೀಕರಮೂರ್ತಿಯು ನೀಂ ||ಪ|

ಲೋಕವ ಪೀಡಿಸುವ |
ವ್ಯಾಕುಲವ ನೀಗುವುದೈ ||ಅ|

ಪಾಲಕ ಪಾಲ್ಯರೊಳು |
ಹೇಳಲಸಾಧ್ಯವಹ |
ಕೋಲಾಹಲವೆದ್ದು ಬಹು |
ಕಾಲ ವ್ಯಥೆಗೊಳಿಪುದು ||೧|

ನ್ಯಾಯವ ನೀಕ್ಷಿಸುತ |
ನ್ಯಾಯಿಗಳ ಶಿಕ್ಷಿಸುವ |
ನ್ಯಾಯಾಧೀಶ ನೀನಲ್ಲವೆ |
ಜೀಯ ಸಾಕ್ಷಿಗಳೇತಕೆ ||೨

ಭಾರತ ಭೂಮಿಯೊಳ |
ಗೀರೀತಿಯ ಸಂತುಷ್ಟಿಯು |
ತೋರಿಹುದು ಪಾರುಮಾಡು |
ಸೂರಿ ಭೀಮರಾಜ ನುತ ||೩

# ಮಿಥ್ಯಾಚಾರ.

(ಸಾಟಿಲೇನಿ ಈವನಂ ಎಂಬಂತೆ)

ರಾಗ—ರೂಪಕ

ಲಹ. ಪಾರವಿಲ್ಲವೈ ಸದಾ |
ಚಾರವೆಲ್ಲ ನೀರು ಬೆರತಿರುವುದು ||ಪ||

ಕ್ರೂರಕರ್ಮ, ಗಳೆಮುಳೆದೋರುತಲಿರುವವು |
ಸಾರಸಾರ, ವರಿತವರತಿ ವಿರಳವು ಹರ ||ಅ||

ಬರಿಯ ನಾಮ ಮುದ್ರೆಗಳ್ |
ಕೊರಳ ರುದ್ರಾಕ್ಷಿಗಳ ಸರ ಗಂಧವು |
ಧರಿಸಿ ಬೂದಿಯನ್ನು ಶರೀರದಿ ನೆರೆ |
ನಿರುತ ಸಟೆಯು ಮೋಸ ದೊಳಗಿರುವರು || ||೧||

ಮೀನ ಸ್ನಾನ ಮುತ್ತಮು |
ಜ್ಞಾನಹೀನ ಬಕನ ಮೌನವು ಜಗ |
ವೇನು ಚೋದ್ಯವಿದನು ನೋಡುವುದೈ |
ಜ್ಞಾನಲೋಲ ಮಾನವ ಪಾಲಕ ದೇವನೆ ||೨||

ಡಂಬಕ್ಕೊಲಿವನಲ್ಲನೀಂ |
ಕಂಬುಕಂಧರ ಭೀಮವರದನೆ ಹರ |
ನಂಬಿದಂಥ ವ್ಯಾಧನನು ಪೊರೆದೆ ಶ್ರೀ |
ಶಂಭುಜಾತಿ ಮತಗಳ ನೋಡುವನಲ್ಲವು ||೩||

## ಮನುಜ ಧರ್ಮ.

(ಪಿಬರೇ ರಾಮರಸಂ ಎಂಬಂತೆ)

ಜೆಹಾಗ್—ಆದಿತಾಳ

ಲ೬. ಮನುಜರೆಂಬುದೊಂದೇ ಜನರನು ||ಪ||

ಮನುಧರ್ಮವನನುಸರಿಸುತಿರುವವರೆ |
ಮನುಜರುಳಿದ ನರ ದನುಜರಲ್ತು ನಿಜ ||೧||

ಸುಳ್ಳು ಮೋಸ ಬಲು ಕಳ್ಳತನವು ಮಿತಿ |
ಯಿಲ್ಲದ ಪಾಪವ ಮಾಡುವರನುದಿನ ||೨||

ನೋಡುನೋಡು ಕೃಪೆಮಾಡು ಭೀಮನುತ |
ನಾಡೆ ಭರತ ಖಂಡವ ಪೊರೆ ಸಂತತ ||೩||

87

# ತ್ರಿಮೂರ್ತಿಗಳು.

(ರಾಜುವೆಡಲೆ ಜೂತಾಮುರಾರೆ ಎಂಬಂತೆ)

ತೋಡಿ—ಆದಿತಾಳ

ಪ. ಯಾರು ತಿಳಿಯದಿರುವರೇತಕಿನ್ನು । ಸಾರಾಂಶವನ್ನು ||ಪ||

ಕಾರಣ ಮಾತ್ರವೆ ಜಗದೊಳು ।
ಮೂರು ಮೂರ್ತಿಗಳು ತೋರಿಯು ।
ತೋರದಂತೆ ಸೇರಿ ಮೂರು ।
ಗುಣಗಳು ಮೊಳೆ ದೋರುತಿಹವು ||೧||

ಜಗವೆಲ್ಲವು ತ್ರಿಗುಣದಲ್ಲಿ ।
ಬಗೆ ಬಗೆಯೊಳು ತೊಳಲುತಿಹುದು ।
ಬಗೆಯಲೊಂದೆ ಜಾತಿಯುವರು ।
ಸುಗುಣದಿಂದಲಿಹರೆ ನೋಡೆ ||೨||

ಅಜ್ಞರರಿಯಲಾರದೆ ಸ ।
ರ್ವಜ್ಞನಲ್ಲಿ ಭೇದವೆಣಿಸಿ ।
ಭಗ್ನ ಮನೋರಥರಾಗುವ ।
ರುಗ್ರ ಭೀಮ ವರದನನ್ನು ||೩||

# ವಿಚಿತ್ರ ಸೃಷ್ಟಿಕ್ರಮ.

(ಹಿಗ್ಗುನೆ ಯಾಕೋ ಈ ದೇಹಕ್ಕೆ ಎಂಬಂತೆ)

ಭೈರವಿ—ಅಟತಾಳ

ಛಲ. ನಿನ್ನ ಸೃಷ್ಟಿಯನು ಬಣ್ಣಿಸಲಾರೆ |
ಉನ್ನತ ವಿಷವೃಕ್ಷಗಳೊಳು ಮಧುರ ಫಲ |
ವನ್ನು ನಿರ್ಮಿಸಿ ಕಬ್ಬಿಗೇಕೆ ಕಲ್ಪಿಸ ದಿರ್ಪೆ ||ಪ||

ಗೇಕುಗಡ್ಡೆಗಳೊಳ್ಸುವಾಸನೆ ಪುಟ್ಟಿಸಿ |
ಬೇಕಾಗಿ ನಿರ್ಗಂಧವಿತ್ತಿಹೆ ಚಿನ್ನಕ್ಕೆ ||೧||

ಅಡವಿಯ ಗಿಡ ಬಳ್ಳಿಗಳೊಳೆಲ್ಲ ಸುಮಗಳ |
ತೊಡರಿಸಿ ಶ್ರೀಗಂಧಕ್ಕಿಡದಿರ್ಪೆಯೇತಕ್ಕೆ ||೨||

ನಿರ್ಗಂಧ ಕುಸುಮಂಗಳೊಳು ಮಧುವನಿಟ್ಟ |
ನರ್ಘ್ಯವಾದ ಕೇತಕಿಗೇತಕಿಡಲಿಲ್ಲ ||೩||

ಗುಣಹೀನರನ್ನೆಲ್ಲ ಧನಿಕರ ಗೈದು ಸ |
ದ್ಗುಣಿಗಳನೆಲ್ಲ ದೀನರ ಗೈದೆ ಯೇತಕ್ಕೆ ||೪||

ಇದರಿಂದ ನೀನಷ್ಟು ಚದುರನಲ್ಲೆಂಬರು |
ಸಧಯ **ಭೀಮ**ರಾಜ ವರದ ಮಹೇಶನೆ ||೫||

---

## ಮಾನವ ಜನ್ಮ.

(ಚಿಂತೆಯಾತಕೋ ಮನದಿ ಎಂಬಂತೆ)

**ಮಧ್ಯಮಾವತಿ—ಆದಿತಾಳ**

೮೯. ಜನ್ಮ ವೇತಕೇ ಮನುಜ | ಜನ್ಮವೇತಕೆ |
ಚಿನ್ಮಯಾತ್ಮನಲ್ಲಿ ಬೆರೆತು | ತನ್ಮಯತ್ವವಾಗದಿರುವ || ಪ ||

ಮರೆತು ಅನ್ಯ ಚಿಂತೆಯನ್ನು |
ಬೆರೆತು ಸಾಧು ಸಂತರನ್ನು |
ತೊರೆದು ಸುದತಿ ಮಕ್ಕಳನ್ನು |
ಗುರುವ ಸೇರದಿರುವ ಹೀನ || ೧ ||

ಶಾಂತಿಯೆಂಬ ಸುದತಿ ಗೂಡಿ |
ಭ್ರಾಂತಿಯುಳಿದು ಶಮದಮಾದಿ |
ಸ್ವಾಂತರೆಂಬ ಸುತರೊಳ್ ತೋಷ |
ವಾಂತು ಮುಕುತಿ ಸೂರೆಗೊಳದ || ೨ ||

ಬಂಧು ಬಳಗವೆಲ್ಲ ಪರಮ |
ತಂದೆಯೊಳ್ಳೈಕ್ಯವದಾಗಿಹು |
ದೆಂದು ನಿರುತ ಭೀಮರಾಜ |
ವಂದ್ಯನನ್ನು ನುತಿಸ ದಿರ್ಪ || ೩ ||

## ಹಿಂದೆ ಬಂದೂ ಬರುವುದಿಲ್ಲ.

(ವೇರೆವ್ವರೋ ನೂವೇಗತಿ ಎಂಬಂತೆ)

ಸುರುಟಿ—ಆದಿತಾಳ

೯೦. ಯಾರಾಗ್ವರು ಪ್ರಾಣಾಂತ್ಯದಿ |
ನಾರಿಸುತರು ತೊಲಗುವರು ॥ ಪ ॥

ಮಾರಾರಿ ನೀನಲ್ಲದೆ ಅನ್ಯ |
ರಾರಿಲ್ಲವೈ ಕಾರುಣ್ಯ ಮೂರ್ತಿ ॥ ಅ ॥

ಧನ ಧಾನ್ಯ ಸಂಪದಗಳು ತನ್ನ |
ಮನೆಯೊಳು ನಿಲ್ಲುವುವೆಲ್ಲವು |
ಅನುಸರಿಪವು ಸುಕೃತ ದುಷ್ಕೃತ |
ಗಣಗಳು ಬಿಡದನುನಯದಿ ॥ ೧ ॥

ಮರಣವು ತಪ್ಪದೆಂದಿರ್ದೊಡುಂ |
ದೊರೆಗು ರಾಜಾಧಿರಾಜನಿಗುಂ |
ಮರೆಹೊಗುವುದಾ **ಭೀಮ**ರಾಜ ದಾಸ |
ವರದ ಮಹೇಶನಡಿಗಳನು ॥ ೨ ॥

# ನಿನ್ನಲ್ಲಿ ಸೇರಿಸು.

(ಹನುಮಂತ ಬಲವಂತ ಎಂಬಂತೆ)

ಶಂಕರಾಭರಣ—ಆದಿತಾಳ

೯೧. ಮುಕ್ಕಣ್ಣ ನೋಡೆನ್ನ |
ದುಃಖವ ಕಳೆ ಮುನ್ನ |
ಅಕ್ಕರದೊಳು ನಿನ್ನ |
ಪಕ್ಕ ದೊಳಿರಿಸಿನ್ನ ‖ ಪ ‖

ಮುನಿಸೇತಕೆನ್ನೊಳು |
ಘನ ಮಹಿಮನೆ ಪೇಳು |
ನೆನೆವೆನು ಮನದೊಳು |
ಕನಿಕರದೊಳು ಕೇಳು ‖ ೧ ‖

ವ್ಯಾಧ ನೀನಾದುದರಿಂ |
ವ್ಯಾಧನ ಪೊರೆದೆಯು ? |
ಸಾಧುವೆ ನಿನಗಿಂಥ |
ಭೇದ ಬುದ್ಧಿಯೆ ಪೇಳ್ವೆ ‖ ೨ ‖

ತನ್ನವರೆನ್ನವರೆಂಬ |
ಭಿನ್ನ ಭೇದಗಳೊಂದು |
ನಿನ್ನೊಳಗಿರದಿರೆ |
ಮುನ್ನ ಭೀಮನ ಕಾಯೋ ‖ ೩ ‖

## ಅಧುನಿಕ ಭಾರತ.

(ಧನ್ಯ ಧನ್ಯ ವಿಬುಧ ಮಾನ್ಯ ಎಂಬಂತೆ)

೯೨. ಜಯವ ನೀಡು ಭಯ ವೀಡಾಡು |
ದಯದೊಳು ನೋಡು | ‖ ಪ ‖

ಒಯಕೆಯ ನೀಂ ಪಾಲಿಸು ಲಯ |
ಕರ್ತೃ ಶಂಭುಶಂಕರ |
ನಯ ವಿನಯದಿ ಪ್ರಾರ್ಥಿಸುವರ |
ಭಯವ ತೋರು ನೀಂ |
ನಿಯಮಿಸು ಸತ್ಕಾರ್ಯದೊಳೆಲ್ಲರನು ಶುಭಕರ ‖ ೧ ‖

ಭರತಮಾತೆಯನ್ನು ಪೊರೆವ |
ಬಿರಿದು ನೀನು ಧರಿಸಿಹೆ |
ನೆರೆ ಹಿಮಾಲಯದೊಳು |
ಬಿಡದೆ ನಿರುತ ನೆಲಸಿಹೆ |
ಕರುಣಾರಸವನು ಬೀರುವುದೆಮ್ಮ ಪ್ರಭುವಿಗೆ ‖ ೧ ‖

ಆಂಗ್ಲ ಸಾರ್ವ ಭೌಮರಿಗುಂ |
ಇಂಗಿತಜ್ಞ ರಾಜರಿಗುಂ |
ತುಂಗದೇಶ ಪ್ರಮುಖರೆನಿಪ |
ಮಹಾಶಯರಿಗುಂ |
ಮಂಗಳವೀಯುವುದು ಭೀಮರಾಜವರದನೆ ‖ ೨ ‖

## ಸ್ವಪ್ನ.

(ಕೃಷ್ಣಮೂರ್ತಿ ಕಣ್ಣ ಮುಂದೆ ಎಂಬಂತೆ)

ಕಾಂಬೋದಿ—ಆದಿತಾಳ

೯೩. ಕಂಡೆನು ನಾನು ಕನಸನೊಂದನ್ನು ।
ಕುಂಡಲಿ ಭೂಷ ಯಿನ್ನೇನನೆಂಬುವೆನು ॥ ಪ ॥

ಮುಗ್ಗರಿಸುತ್ತಿಹ ಬಗ್ಗಿದ ಮುದುಕ ।
ಕುಗ್ಗಿದ ತನುವಿನ ಸುಕ್ಕಿರುವ ಮುಖ ।
ತಗ್ಗದ ಆಸೆಯುಪರಿಮಿತ ದುಃಖ ।
ಹಿಗ್ಗುವ ಸ್ಥಿರವೆಂದು ಸಾಯುವ ತನಕ ॥ ೧ ॥

ರೋಗದಿ ನರಳುವ ರೋಗಿಯೋರ್ವನ ।
ರಾಗವನುಳಿದು ಹಾಸಿಗೆಯಲ್ಲಿರುವನ ।
ಕೂಗುತಯ್ಯೋ ಯೆಂದು ಮೊರೆಯಿಡುವವನ ।
ಆಗಾಗ ಮೂರ್ಛೆಯಿಂ ಮೈಮರೆವವನ ॥ ೨ ॥

ಸತ್ತು ಬಿದ್ದಿರುವ ಶ್ರವವನೊಂದನ್ನು ।
ಸುತ್ತಲು ಕುಳಿತಳುತಿರುವ ಜನರನ್ನು ।
ಹೊತ್ತುಕೊಂಡೊಯ್ದು ಹೂತಿಟ್ಟುದ ನಾನು ।
ಚಿತ್ತಜ ರಿಪು ಭೀಮರಾಜ ವರದನೇ ॥ ೩ ॥

## ಜ್ಞಾನೋದಯವಾದಾಗಲೇ ಪುನರ್ಜನ್ಮ.

(ಕಾವದೇವ ನೀನಲ್ಲದೆ ಜಗಕಿನ್ನಾವ ಎಂಬಂತೆ)

ಮಧ್ಯಮಾವತಿ—ಆದಿತಾಳ

೯೪. ನಿನ್ನ ಪದಾಬ್ಜಗಳನ್ನು ನುತಿಸುವವ |
ಗಿನ್ನು ನರಕವುಂಟೇ? |
ಮುನ್ನ ಭಕ್ತರೆನಿತೋ ಜನರನ್ನು ನೀ |
ಮನ್ನಿಸಿ ಪೊರೆದೆ ಶ್ರೀ | ಪನ್ನಗ ಭೂಷನೆ || ಪ ||

ಹಿಂದೆಮಾಡಿದ ತಪ್ಪುಗಳನು ಸ್ಮರಿಸುತೆ |
ನೊಂದು ನಿನ್ನೊಳು ಕ್ಷಮೆಯ |
ತಂದೆ ಕಾವುದೆಂದೆನುತಲಿ ಬೇಡುವ |
ಮಂದಭಾಗ್ಯನನು ಕರುಣಿಸದಿರುವೆಯು ? || ೧ ||

ಆನೆಯ ಮೇಲೇರಿ ಚರಿಸುವ ಮನುಜಗೆ |
ಸ್ವಾನದ ಭಯವುಂಟೇ ? |
ಜ್ಞಾನಿಯಾಗಿ ನಿನ್ನ ನಾಮವ ನುತಿಸಲು |
ಧೇನುವಾಗಿ ನೀಂ ಪೊರೆಯುವೆ ಭಕ್ತರ || ೨ ||

ಜೀವಹಿಂಸೆಯನು ಮಾಡಿದ ವ್ಯಾಧನ |
ಪಾವನವನು ಗೈದೆ |
ಭಾವಜಾರಿ ಭೀಮರಾಜ ವರದ ಮಹ |
ದೇವ ಪೊರೆಯೊ ಭಾರತ ಭೂವಲಯವ || ೩ ||

# ಲೋಕವನ್ನು ಮೆಚ್ಚಿಸಲಾಗದು.

(ಕಲ್ಲುಸಕ್ಕರೆ ಕೊಳ್ಳಿರೋ ಎಂಬಂತೆ)

ಕಲ್ಯಾಣಿ—ಅಟತಾಳ.

೯೫. ಮೆಚ್ಚಿಸಲಾರೆನು ನಾ | ನೀ ಜನರನ್ನು ‖ ಪ ‖

ಮೆಚ್ಚಿಸಲಾರೆನು | ಕುಚ್ಛಿತ ಜನರನ್ನು |
ಹುಚ್ಚನೆಂಬರು ಮೌನದೊಳು ಧ್ಯಾನಗೈದರೆ ‖ ಅ ‖

ವಾಚಾಳಿಯನ್ನು ಹರಟೆಮಲ್ಲನೆಂಬರು |
ಆಚಾರಗೈಯ್ಯೆ ಡಾಂಬಿಕನೆಂಬರು |
ಯಾಚಿಪ.ಸಾಧುವ ನೀಚನೆಂದೆಂಬರು |
ಯೋಚಿಸೆ ತೀರದು ಈ ಚಿತ್ರ ನಡತೆಯ ‖ ೧ ‖

ವಿದ್ಯಾಹೀನನ ಮದ್ದು ಮನುಜನೆಂದೆಂಬರು |
ವಿದ್ಯಾವಂತನ ನಿಂದಿಸುತ್ತಿರ್ಪರು |
ಶುದ್ಧಾತ್ಮನೊಳು ದೋಷಗಳನು ಕಲ್ಪಿಸುವರ |
ಬದ್ಧ ನುಡಿವನೆ ಉತ್ತಮನೆಂದು ಪೊಗಳ್ವರು ‖ ೨ ‖

ಖಂಡಿತ ವಾದಿಯು ಲೋಕ ವಿರೋಧಿಯು |
ಕೊಂಡಿ ಮಂಚನು ಲೋಕಪೂಜ್ಯನು ತಾಂ |
ಖಂಡೇಂದು ಧರ ಭೀಮರಾಜ ವರದ ನಿನ್ನ |
ಕಂಡು ಮೆಚ್ಚಿಪುದೊಂದೇ ಇಹಪರ ಸಾಧನ ‖ ೩ ‖

# ಭರತ ಖಂಡವು ನಿನ್ನದು.

(ಪಾಲಯುಮಾಂ ಶ್ರೀ ಗೌರಿ ಎಂಬಂತೆ)

ರಾಗ—ರೂಪಕ

೯೬. ನಿನ್ನ ನಾಮ ಮಹಿಮೆಯುನ್ನು |
ಮುನ್ನ ರಾಮಚಂದ್ರನೋರ್ವ |
ಚಿಣ್ಣ ಮಾರ್ಕಾಂಡೇಯನೋರ್ವ |
ಕನ್ನೆ ಪಾರ್ವತಿ || ಮೂವರು ಬಲ್ಲರು ಜಗದೊಳು || ಪ ||

ನಂದಿ ಭೃಂಗಿ ಪ್ರಮುಥರು ಸಾ |
ನಂದಗಣಪ ಮುಖ್ಯ ಪ್ರಮುಖ |
ರೆಂದು ನಿನ್ನ ಸೇವೆಯೊಳಾ |
ನಂದಸುಖವ || ಪೊಂದುತೆ ನಲಿವರು ಗುರುವರ || ೧ ||

ನಿತ್ಯ ಮೋಕ್ಷ ವೀವೆ ನೀನು |
ಭೃತ್ಯವರ್ಗಕ್ಕೈದೆ ಮುದದಿ |
ಅತ್ಯಧಿಕರು ನಾವೆಂಬವ |
ಮರ್ತ್ಯರಹಂ || ಭಾವವ ಮುರಿದೀಡಾಡುವೆ || ೨ ||

ಹಿಮನಗಜಾಮಾತೃವು ನೀಂ |
ಹಿಮನಗಪತಿ ಭೀಮ ವರದ |
ಹಿಮನಗಮಾಸೇತು ಯುತ ವಿಾ |
ಸುಮಹಿತ ಭರ || ತಾವನಿಯುನು ಪಾಲಿಸು ಹರ || ೩ ||

# ಆಶಾಪಾಶ ಚ್ಛೇದ.

(ರಾಮನಾಮತು ಭಜರೆ ಪ್ಯಾರೆ)

ರಾಗ—ಆದಿತಾಳ

೯೭. ಕಳೆಯೊ ಕಳೆಯೊ ನೀನೀಷಣತ್ರಯಗಳ |
ತಿಳಿಯೊ ತಿಳಿಯೊ ಪರತತ್ವವನು || ಪ ||

ಕುಲವು ವಯೋ ರೂಪಗಳುಳಿಯುವವೇ? |
ಬಲವು ಸ್ಥಿರದೊಳಿರುವುದೆ ನಿರುತ |
ಕಳವಳ ಪಡದೆ ನೀನಿರುತಿಹೆ ಮನುಜ |
ಫಲವು ದೊರೆವುದೆಂತಿದ ನಾಲೋಚಿಸು || ೧ ||

ಎಷ್ಟು ವರುಷಗಳು ಬದುಕಿದರುಂ ನೀಂ |
ಕಷ್ಟದಿ ಸಾಯದ ಲುಳಿಯುವೆಯೂ ? |
ಅಷ್ಟಭೋಗ ಭಾಗ್ಯಂಗಳು ಪೋಗುವ |
ವಿಷ್ಟ ಬಂದ ಕಡೆ ತೊರೆದು ನಿನ್ನನವು || ೨ ||

ನೆನೆ ನೆನೆ ಮನದೊಳು ಮನಸಿಜಾರಿಯಂ |
ಅನಘನು ನೀನಾಗುವೆ ನಿತ್ಯ |
ಜನಿತಾಂತಃ ಕರುಣವ ನೀಡಾಡಲು |
ಅನುದಿನ **ಭೀಮ** ವರದ ಕಾಪಾಡುವ || ೩ ||

---

# ಮನೋ ನಿಗ್ರಹ.

(ಬಟುವಾಕುಂತನ ಎಂಬಂತೆ)

ರಾಗ—ತಾಳ

೯ಲ. ಚಿತ್ತದಿ ಜನಿಪ ವಿಚಿತ್ರ ಕಲ್ಪನೆಯೊ |
ಳುತ್ತಮವೆನಿಪುದನಂ |
ಉತ್ತಮೋತ್ತಮನೀಂ ವೃದ್ಧಿಯಗೊಳಿಪುದು |
ಚಿತ್ತಜರಿಪು ಜನದಿಂ || ಪ ||

ಮನೋಜ ವೈರಿಯು | ಮನೋಜ ಮಿತ್ರನು |
ಮನೋಜ ಮಾನ್ಯನು ನೀಂ |
ಮನೋ ವಿಕಲ್ಪಗಳನು ಮಾಣಿಸುಮ |
ನ್ಮನವನಾಕರ್ಷಿಸುತ || ೧ ||

ನಿನ್ನ ಸ್ಮರಣೆಯೆಂ | ಬುನ್ನತ ಶಿಖರವ |
ನನ್ನಿಯೊಳೇರಿದವ |
ನಿನ್ನು ದುಃಖ ಶರಧಿಯೊಳುರುಳುವನೇ |
ತನ್ನನರಿತ ಮೇಲೆ || ೨ ||

ಸೋಮಮೌಳಿ ಪದಸೇವಕನೆನಿಸುವ |
ಭೀಮರಾಜನನಿಶಂ |
ಕಾಮಿಸಿ ನಿನ್ನಯ ದಾಸರ ಸಂಗವ |
ಪ್ರೇಮದಿ ನುತಿಸುವ ತಾಂ || ೩ ||

# ಸರ್ವ ಮಂಗಳಾಕಾಂಕ್ಷೆ.

## ಮಂಗಳಂ

(ಅಂಗಜ ಮದಹರ ಎಂಬಂತೆ)

ಸುರಟಿ—ಅಟತಾಳ

೯೯. ಮಂಗಳಮಿಾ ಭಾರತ | ಪುಂಗವರಿಗನಿಶಂ || ಪ ||

ಭಂಗವ ನೀಗುತಲ | ನಂಗ ರಿಪುವೆ ಬುಧ |
ಪುಂಗವರಾಶಯುವ | ಸಾಂಗವ ಗೊಳಿಪುದು ನೀಂ || ಅ ||

ರಾಜ ಪ್ರಜೆಗಳಿಗೆ ರಾಜನು ನೀನಾಗಿಹೆ |
ಸೋಜಿಗವಿಂತು ಜಗ | ವ್ಯಾಜದೊಳಿರುವುದು |
ನೀ ಜಡನಂತೀಪರಿ | ರಾಜೇಂದ್ರ ಮೌನ ದಿರ್ಪರೆ || ೧ ||

ಪಂಡಿತ ಪಂಡಿತರಿತ್ತಂಡ ವಾದದೊಳು |
ಖಂಡಿತ ವರಿಯದೆ |ಕಂಡ ಕಂಡದದೆ |
ಅಂಡಲೆಯುುವರು ನೀಂ | ಖಂಡಿತ ನುಡಿವುದೈ || ೨ ||

ತೋರದು ಪಾಮರರಿಗೇನೊಂದು ಮಿದರೊಳು |
ತೋರಿಸು ನಿಶ್ಚಯುವ | ಮಾರ ವಿದಾರಿ ಜವ |
ಸೂರಿ ವಿಧೇಯು ಭೀಮರಾಜ ವರದನೆ ಭವ || ೩ ||

## ನಿತ್ಯಮಂಗಳಂ.

(ನೀನಾಮ ರೂಪಮುಲಕು ನಿತ್ಯಮಂಗಳಂ ಎಂಬಂತೆ)

ಸೌರಾಷ್ಟ್ರ—ಆದಿತಾಳ

೧೦೦. ಈ ಸರ್ವ ಜಗಕೆ ನಿತ್ಯಮಂಗಳವನೀವುದೈ || ಪ ||

ನೀ ಸರ್ವ ಮಂಗಳೆಯ ಅರಸನಾಗಿ ಪೂಜೆಗೊಳ್ಳೈ || ೧ ||

ಪಾವನ ಪತಿತಜನ ದೇವಾಧಿದೇವ ಕಾಯೋ || ೨ ||

ಸತ್ಯ ಸಂಕಲ್ಪ ನೀನು ನಿತ್ಯತೃಪ್ತ ನಿಗಮ ವಿನುತ || ೩ ||

ನಾಗಭೂಷಣನೆ ನಿತ್ಯಯೋಗಿ ನಮಿತ ರಾಗರಹಿತ || ೪ ||

ಭಾರತ ಮಾತೆಯನ್ನು ಕಾಯೊ ನಿರುತ ಭೀಮವರದ || ೫ ||



# ಶುದ್ಧಾಶುದ್ಧ ಪತ್ರಿಕೆ.

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಮಾಡಿದೋ | ಮಾಡಿದೆನೋ | 5 | 19 |
| ವಾಸಿಸುತ | ವಾಸಿಸುತ್ತಾ | 7 | 6 |
| ನೀನಲದೆ | ನೀನಲ್ಲದೆ | 18 | 16 |
| ಬೇಡುವೆ | ಬೇಡುವ | 37 | 8 |
| ನೆನೆದುಬ್ದುತೆ | ನೆನೆದುಬ್ಬುತೆ | 50 | 8 |
| ವಿನು | ವಿದು | 52 | 18 |
| ಜಿ್ತನ | ಚಿ್ತನ | 57 | 24 |
| ಮಹಿವ | ಮಹಿಮ | 59 | 5 |
| ದೂರವರು | ದೂರುವರು | 60 | 4 |
| ಜನದೊಳು | ಜಗದೊಳು | 60 | 5 |
| ಮೊದ | ಮೋದ | 66 | 5 |
| ಜನವವ | ಜನನವ | 67 | 10 |
| ಭಿಮ | ಭೀಮ | 69 | 15 |
| ಬುದಿಯಂ | ಬುದ್ಧಿಯಂ | 81 | 11 |
| ಇಂಗಿತಜ | ಇಂಗಿತಜ್ಞ | 92 | 16 |
| ಲುಳಿಯುವೆಯೂ | ಲುಳಿಯುವೆಯಾ | 97 | 11 |
| ಕಂಡದದೆ | ಕಂಡಂದದೆ | 99 | 12 |

# ಅಭಿಪ್ರಾಯ.

ಚಿತ್ರದುರ್ಗದ ಪ್ರಸಿದ್ಧಕೀರ್ತನಕಾರರೂ, ಕರ್ನಾಟ ಕಾಂಧ್ರ ಕವಿಗಳೂ ಆದ ಶ್ರೀ ಬಿ. ಭೀಮರಾಜು ಯವರು ಕರ್ನಾಟಕ ಶಿವ ಕೀರ್ತನೆಗಳನ್ನು ರಚಿಸಿ, ಕನ್ನಡಿಗರ ಕೈಸೇರಿಸಿರುವರು. ಕೀರ್ತನಗಳಲ್ಲಿ ಪರ ಮಾತ್ಮನ ಗುಣವರ್ಣನೆಯು ಹೃದಯಂಗಮವಾಗಿಯೂ, ಅತಿ ಸುಲಭರೀತಿಯಾಗಿಯೂ ಉದಹರಿಸಿ ಕನ್ನಡಿಗರಿಗೆ ನವಚೇತನವನ್ನುಂಟು ಮಾಡಿದುದಕ್ಕಾಗಿ ಅವರನ್ನು ಅಭಿನಂದಿಸಬೇಕಾಗಿರುವುದು.

ಕೀರ್ತನಗಳು ವಿಷಯ ನಿರೂಪಣಕ್ಕನುಸಾರವಾಗಿ ಭಕ್ತಿ, ಜ್ಞಾನ, ವೈರಾಗ್ಯಯುತಗಳಾಗಿ ಅಧ್ಯಾತ್ಮಬೋಧಕ ಗಳಾಗಿ ಸರ್ವ ಸಮಂಜಸಗಳಾಗಿರುವುವು. ಇದರಲ್ಲಿ ವಿಘ್ನೇಶ್ವರ ಸ್ತುತಿ, ವಿರಾಡ್ರೂಪನ ಸ್ತುತಿ ಮೊದಲಾದ ನೂರು ವಿಷಯಗಳೂ ಪಠನೀಯಗಳಾಗಿರುವುವು. ಶ್ರೀ ರಾಜುಯವರ ಕವಿತಾ ಮಾಧುರ್ಯವನ್ನು ಕನ್ನಡಿಗರು ಸವಿದು ಕೃತಾರ್ಥರಾಗಬೇಕೆಂದು ಅಪೇಕ್ಷಿಸುತ್ತೇವೆ.

**ಸಂಪಾದಕ,**

ಧಾರವಾಡ. ಕರ್ನಾಟಕ ವೃತ್ತ.

